# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಮೇ ೨೮, ೨೦೧೫ (ಜ್ಯೇಷ್ಠ ೭, ಶಕ ವರ್ಷ ೧೯೩೭)<br>Bengaluru, Thursday, May 28, 2015 (Jyeishta 7, Shaka Varsha 1937) | ಸಂಚಿಕೆ ೨೨<br>Issue 22 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಾನೂನು ಸಚಿವಾಲಯ

**ವಿಷಯ :** ಭದ್ರಾವತಿ ಕಂದಾಯ ತಾಲ್ಲೂಕಿನಲ್ಲಿ ಖಾಲಿಯಿರುವ ನೋಟರಿ ಹುದ್ದೆಯನ್ನು ತುಂಬುವ ಬಗ್ಗೆ.

**ಓದಲಾಗಿದೆ :**

1. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಶಿವಮೊಗ್ಗ ಇವರ ಪತ್ರ ಸಂಖ್ಯೆ : ಆಡಳಿತ : ಜಿಸನ್ಯಾ: 15239: 2013, ದಿನಾಂಕ : 14–06–2013.
2. ಸರ್ಕಾರದ ಸಮ ಸಂಖ್ಯೆಯ ಪತ್ರದ ದಿನಾಂಕ : 24–06–2013.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಶಿವಮೊಗ್ಗ ಇವರ ಪತ್ರ ಸಂಖ್ಯೆ : ಆಡಳಿತ : ಜಿಸನ್ಯಾ: 17645: 2013, ದಿನಾಂಕ : 23–07–2013.
4. ಸರ್ಕಾರದ ಸಮ ಸಂಖ್ಯೆಯ ಪತ್ರದ ದಿನಾಂಕ : 19–05–2014.
5. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಶಿವಮೊಗ್ಗ ಇವರ ಪತ್ರ ಸಂಖ್ಯೆ : ಆಡಳಿತ : ಜಿಸನ್ಯಾ: 17390 : 2014, ದಿನಾಂಕ : 25–09–2014.
6. ಸರ್ಕಾರದ ಅಧಿಸೂಚನೆ ಸಂಖ್ಯೆ : ಲಾ 61 ಎಲ್‌ಸಿಎಲ್ 2014, ದಿನಾಂಕ : 14–07–2014.
7. ಸರ್ಕಾರದ ಸಮ ಸಂಖ್ಯೆ ಸಂದರ್ಶನ ಸಭಾ ಸೂಚನಾ ಪತ್ರದ ದಿನಾಂಕ : 28–11–2014.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪ್ರಧಾನ ಜಿಲ್ಲಾ ಸತ್ರ ನ್ಯಾಯಾಧೀಶರು, ಶಿವಮೊಗ್ಗ ಇವರ ಪತ್ರದಂತೆ ಭದ್ರಾವತಿ ಕಂದಾಯ ತಾಲ್ಲೂಕಿನಲ್ಲಿ ನೋಟರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ಹೆಚ್.ಪಿ. ಬಸವರಾಜಪ್ಪ, ಇವರು ದಿನಾಂಕ : 11–03–2013ರಂದು ನಿಧನರಾಗಿದ್ದು ಸದರಿಯವರ ಮರಣ ಪ್ರಮಾಣಪತ್ರವನ್ನು ಸೂಕ್ತ ಕ್ರಮಕ್ಕಾಗಿ ಸರ್ಕಾರಕ್ಕೆ ಕಳುಹಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರದ ಸಮಸಂಖ್ಯೆ ಪತ್ರದಲ್ಲಿ ಭದ್ರಾವತಿ ಕಂದಾಯ ತಾಲ್ಲೂಕು, ಶಿವಮೊಗ್ಗ ಜಿಲ್ಲೆಯಲ್ಲಿ ಖಾಲಿಯಿರುವ ನೋಟರಿ ಹುದ್ದೆಯನ್ನು ತುಂಬುವ ಕುರಿತಂತೆ ಅಭಿಪ್ರಾಯ ಸಲ್ಲಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಶಿವಮೊಗ್ಗ ಇವರನ್ನು ಕೋರಲಾಗಿತ್ತು. ಆ ಮೇರೆಗೆ ಕ್ರಮಸಂಖ್ಯೆ (3)ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ನೀಡಿರುವ ವರದಿಯಂತೆ ಶ್ರೀ ಹೆಚ್.ಪಿ. ಬಸವರಾಜಪ್ಪ, ಇವರ ನಿಧನದಿಂದ ತೆರವಾದ ಸ್ಥಾನವನ್ನು ತುಂಬುವುದು ತುಂಬಾ ಅವಶ್ಯಕತೆಯಿದೆಯೆಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಭದ್ರಾವತಿ ಕಂದಾಯ ತಾಲ್ಲೂಕು (ಶಿವಮೊಗ್ಗ ಜಿಲ್ಲೆ) ಇಲ್ಲಿ ಖಾಲಿಯಿರುವ ನೋಟರಿ ಹುದ್ದೆಯನ್ನು ತುಂಬುವ ಕುರಿತಂತೆ ನೋಟರಿಗಳ ಅಧಿನಿಯಮ/ನಿಯಮಗಳು 1956 ನಿಯಮ 6(1)(2) ಮತ್ತು 7(1)(2)(3) ರನ್ವಯ ಮತ್ತು ತಿದ್ದುಪಡಿ ನಿಯಮಗಳನ್ವಯ ಅಧಿಸೂಚನೆ ಹೊರಡಿಸಿ ಸ್ಥಳೀಯ ಜಾಹೀರಾತು ನೀಡಿ ಆ ಮೂಲಕ ಸ್ವೀಕರಿಸುವ ಅರ್ಜಿಗಳನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳ 1977ರ ನಿಯಮ 12 ರನ್ವಯ ಪರಿಶೀಲಿಸಿ ಅವರ ಅಭಿಪ್ರಾಯದೊಂದಿಗೆ ಸರ್ಕಾರಕ್ಕೆ

ಪ್ರಸ್ತಾವನೆಯನ್ನು ಸಲ್ಲಿಸುವಂತೆ ಕೋರಲಾಗಿತ್ತು. ಆ ಮೇರೆಗೆ ಕ್ರಮ ಸಂಖ್ಯೆ (5)ರ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪತ್ರದಲ್ಲಿ 55 ವಕೀಲರುಗಳ ಮೆಮೋರಿಯಲ್‌ಗಳನ್ನು ಅವರ ಅಭಿಪ್ರಾಯದೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಸರ್ಕಾರಿ ಅಧಿಸೂಚನೆಯಲ್ಲಿ ಕೇಂದ್ರ ಅಧಿನಿಯಮದ section 15 ರಲ್ಲಿ (1951 ಅಧಿನಿಯಮ 53) ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು ಹಾಗೂ 2009ರ ನೋಟರಿಗಳ (ತಿದ್ದುಪಡಿ) ನಿಯಮಗಳ ನಿಯಮ 7(a)2 ರನ್ವಯ ನೋಟರಿ ಹುದ್ದೆಯ ನೇಮಕಾತಿ ಆಯ್ಕೆಗೆ ಸಂದರ್ಶನ ಮಂಡಳಿಯನ್ನು ರಚಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಸಭಾ ಸೂಚನಾ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಸ್ತಾವನೆಯಲ್ಲಿ ಶಿಫಾರಸ್ಸು ಮಾಡಿರುವ ಎಲ್ಲಾ ವಕೀಲರುಗಳನ್ನು ಸಂದರ್ಶನಕ್ಕೆ ಆಹ್ವಾನಿಸಿ ದಿನಾಂಕ : 23–12–2014ರಂದು ನಡೆದ ಸಂದರ್ಶನ ಮಂಡಳಿಯಲ್ಲಿ ಶ್ರೀ ರಂಗನಾಥ್, ವಕೀಲರು, ಇವರನ್ನು ಭದ್ರಾವತಿ ಕಂದಾಯ ತಾಲ್ಲೂಕಿನಲ್ಲಿ ಖಾಲಿಯಿರುವ ನೋಟರಿ ಹುದ್ದೆಗೆ ನೇಮಕ ಮಾಡಲು ಶಿಫಾರಸ್ಸು ಮಾಡಿರುತ್ತದೆ.

ಆ ಮೇರೆಗೆ ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 108 ಎಲ್‌ಸಿಎಲ್ 2013, ಬೆಂಗಳೂರು, ದಿನಾಂಕ : 20–01–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ನೋಟರಿ ಅಧಿನಿಯಮ 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು, 1956 ನಿಯಮ 8(1)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಶ್ರೀ ರಂಗನಾಥ್ ಎನ್. ಶ್ರೀ ಲಕ್ಷ್ಮೀರಂಗನಾಥ ನಿಲಯ, ಚರ್ಚ್ ರೋಡ್, ಕೇಶವಪುರ ಎಕ್ಸ್ ಟೆನ್‌ಷನ್, ಓಲ್ಡ್ ಟೌನ್, ಭದ್ರಾವತಿ–577301, ಶಿವಮೊಗ್ಗ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ 5 (ಐದು) ವರ್ಷಗಳ ಅವಧಿಗೆ ಭದ್ರಾವತಿ ಕಂದಾಯ ತಾಲ್ಲೂಕಿನಲ್ಲಿ ಖಾಲಿ ಇರುವ ನೋಟರಿ ಹುದ್ದೆಗೆ ನೇಮಕಾತಿ ಮಾಡಲಾಗಿದೆ.

ಸದರಿ ವಕೀಲರು ಲೆಕ್ಕಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ 501–0–ಇತರೆ ಸ್ವೀಕೃತಿಗಳು–06 – ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ರೂ. 1000.00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರವನ್ನು ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952 ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ನೋಟರಿ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಯಿದಾ ಬಾನು**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ–2).

P.R. 110

SC-25

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 200 ಸಲುಸೇ 2014, ಬೆಂಗಳೂರು, ದಿನಾಂಕ : 16–01–2015.**

ಶ್ರೀಮತಿ ಕೌಸಲ್ಯಾ, ಉಪ ಕಾರ್ಯದರ್ಶಿ, ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯ, ಇವರ ಜನ್ಮ ದಿನಾಂಕವನ್ನು ಸೇವಾ ಪುಸ್ತಕದಲ್ಲಿ ತಿದ್ದುಪಡಿ ಮಾಡುವ ಬಗ್ಗೆ. ಅಧಿಕಾರಿಯವರು ಕೆಲಸಕ್ಕೆ ಸೇರಿದ ಮೂರು ವರ್ಷದೊಳಗೆ ನಿಗದಿತ ಸಮಯದಲ್ಲಿ ಅರ್ಜಿ ಸಲ್ಲಿಸಿದ್ದಾರೆಯೇ ಎಂಬ ಬಗ್ಗೆ ವಸ್ತುಸ್ಥಿತಿಯನ್ನು ಅರಿಯಲು **The Karnataka State Servants (Determination Of Age) Act, 1974** ರ ಕಲಂ 5(2) ರನ್ವಯ ವಿಚಾರಣೆಯನ್ನು ನಡೆಸುವ ಸಲುವಾಗಿ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 200 ಸಲುಸೇ 2014, ದಿನಾಂಕ : 3–1–2014ರಲ್ಲಿ **ಸರ್ಕಾರದ ಉಪ ಕಾರ್ಯದರ್ಶಿ (ಅಭಿಪ್ರಾಯ–1), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ** ನೇಮಿಸಿರುವುದನ್ನು ರದ್ದುಪಡಿಸಿ **ವಾದೇಕ್ಷಕರು ಹಾಗೂ ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರ ವಿಚಾರಣಾಧಿಕಾರಿಯನ್ನಾಗಿ** ನೇಮಿಸಿ ಆದೇಶಿಸಿದೆ.

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ–2), ಇವರೇ ವಿಚಾರಣೆಯಲ್ಲಿ **ಮಂಡನಾಧಿಕಾರಿಯಾಗಿ** ಮುಂದುವರೆಯುತ್ತಾರೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ನಡೆಸಿ, 3 (ಮೂರು) ತಿಂಗಳೊಳಗಾಗಿ ತಮ್ಮ ಸ್ಪಷ್ಟ ಅಭಿಪ್ರಾಯಗಳನ್ನೊಳಗೊಂಡ ವಿಚಾರಣಾ ವರದಿಯನ್ನು ಅಧಿಕಾರಿಯವರ ನೇಮಕಾತಿ ಪ್ರಾಧಿಕಾರವಾಗಿರುವ ಸರ್ಕಾರಕ್ಕೆ ಸಲ್ಲಿಸುವಂತೆ ತಿಳಿಸಲಾಗಿದೆ ಹಾಗೂ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯವರು ನಿಯಮಾನುಸಾರ ಸಂಚಿತ ಸಂಭಾವನೆಯನ್ನು ಮತ್ತು ಮಂಡನಾಧಿಕಾರಿಯವರು ನಿಯಮಾನುಸಾರ ದಿನ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6).

P.R. 111

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಮೈಸೂರು ತಾಲ್ಲೂಕು ಜಯಪುರ ಹೋಬಳಿ ಬಲ್ಲಹಳ್ಳಿ ಗ್ರಾಮದಲ್ಲಿ ನಿರ್ಮಿಸಲು ಉದ್ದೇಶಿಸಿರುವ ವಸತಿ ಬಡಾವಣೆ ಯೋಜನೆ ಕಾಮಗಾರಿಯ ಅಂದಾಜು ಪಟ್ಟಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ ರವರ ಪತ್ರ ಸಂಖ್ಯೆ : ಮೈನಪ್ರಾ/ವ.ಕ–7/2013–14, ದಿನಾಂಕ : 18–09–2013 ಮತ್ತು 12–02–2014.

ಆಯುಕ್ತರು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ ರವರು ಮೇಲೆ ಓದಲಾದ ಪತ್ರದಲ್ಲಿ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ಮೈಸೂರು ತಾಲ್ಲೂಕಿನ ಜಯಪುರ ಹೋಬಳಿ ಬಲ್ಲಹಳ್ಳಿ ಗ್ರಾಮದ ಹತ್ತಿರ 484 ಎಕರೆ 28 ಗುಂಟೆ ಪ್ರದೇಶದಲ್ಲಿ 40 : 60ರ ಅನುಪಾತದಲ್ಲಿ ರೈತರ ಸಹಭಾಗಿತ್ವ ಯೋಜನೆಯಡಿಯಲ್ಲಿ ವಸತಿ ಬಡಾವಣೆಯನ್ನು ನಿರ್ಮಿಸಲು ಸದರಿ ಯೋಜಿತ ಬಡಾವಣೆಯಲ್ಲಿ 15 X 24 ಮೀ, 12 X 18 ಮೀ, 9 X 15 ಮೀ, 9 X 12 ಮೀ, 6 X 9 ಮೀ, ನ ವಿವಿಧ ಅಳತೆಯ ಒಟ್ಟು 6155 ನಿವೇಶನಗಳನ್ನು ರಚಿಸಲು ರೂ. 258.00 ಕೋಟಿಗಳ ಕಾಮಗಾರಿಯ ಅಂದಾಜು ಪಟ್ಟಿಯನ್ನು ಸರ್ಕಾರದ ಆಡಳಿತಾತ್ಮಕ ಅನುಮೋದನೆಗೆ ಸಲ್ಲಿಸಿರುತ್ತಾರೆ.

ಕಾಮಗಾರಿಯ ಅಂದಾಜು ಪಟ್ಟಿಯನ್ನು ಪರಿಶೀಲಿಸಲಾಗಿದ್ದು, ವಸತಿ ಬಡಾವಣೆ ಯೋಜನೆಯ ನಿರ್ಮಾಣಕ್ಕೆ ಅವಶ್ಯಕವಾದ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಬೇಕಾದ ರಸ್ತೆ ನಿರ್ಮಾಣ, ಚರಂಡಿ ಮತ್ತು ಮೋರಿ ನಿರ್ಮಾಣ, ನೀರು ಸರಬರಾಜು ಕಾಮಗಾರಿಗಳು, ಒಳಚರಂಡಿ ಕಾಮಗಾರಿಗಳು, ವಿದ್ಯುದೀಕರಣ ಕಾಮಗಾರಿಗಳು ಇನ್ನಿತರೆ ಎಲ್ಲಾ ಅಂಶಗಳನ್ನು ಅಳವಡಿಸಿಕೊಂಡು ಅಗತ್ಯ ನಕ್ಷೆಗಳೊಂದಿಗೆ ಅಂದಾಜು ಪಟ್ಟಿಯನ್ನು ತಯಾರಿಸುವುದು ಕಂಡುಬಂದಿರುತ್ತದೆ.

ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ ರವರು ಬಡಾವಣೆ ಅಭಿವೃದ್ಧಿಯಾದ ಮೇಲೆ ವಾಣಿಜ್ಯ ಮತ್ತು ಮೂಲೆ ನಿವೇಶನಗಳ ಬೆಲೆಯು ಮತ್ತಷ್ಟು ಹೆಚ್ಚುವರಿಯಾಗುವ ಸಾಧ್ಯತೆ ಇದ್ದು, ಮುಂದಿನ ದಿನಗಳಲ್ಲಿ ಹೆಚ್ಚಿನ ಲಾಭ ಬರುವ ಸಾಧ್ಯತೆ ಇರುತ್ತದೆ ಹಾಗೂ ಪ್ರಸ್ತುತ ಸದರಿ ಯೋಜನೆಯನ್ನು ಲಾಭ–ನಷ್ಟಗಳ ಆಧಾರದ ಮೇಲೆ ಅನುಷ್ಠಾನಗೊಳಿಸಲಾಗುತ್ತಿದೆ ಎಂದು ಪ್ರಸ್ತಾವನೆಯಲ್ಲಿ ತಿಳಿಸಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 534 ಮೈಅಪ್ರಾ 2013, ಬೆಂಗಳೂರು, ದಿನಾಂಕ : 30–01–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 40:60 ರ ಅನುಪಾತದಲ್ಲಿ ರೈತರ ಸಹಭಾಗಿತ್ವ ಯೋಜನೆಯಡಿಯಲ್ಲಿ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ಮೈಸೂರು ತಾಲ್ಲೂಕಿನ ಜಯಪುರ ಹೋಬಳಿಯ ಬಲ್ಲಹಳ್ಳಿ ಗ್ರಾಮದ 484 ಎಕರೆ 28 ಗುಂಟೆ ಪ್ರದೇಶದಲ್ಲಿ ವಸತಿ ಬಡಾವಣೆಯನ್ನು ನಿರ್ಮಿಸುವ ಕಾಮಗಾರಿಯ ಅಂದಾಜು ಮೊತ್ತ ರೂ. 258 ಕೋಟಿಗಳ (ರೂಪಾಯಿ ಇನ್ನೂರ ಐವತ್ತು ಎಂಟು ಕೋಟಿಗಳು ಮಾತ್ರ) ಅಂದಾಜು ಪಟ್ಟಿಗೆ ಈ ಕೆಳಕಂಡ ಷರತ್ತುಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

1) ಕಾಮಗಾರಿಗೆ ಅಗತ್ಯವಿರುವ ಅನುದಾನವನ್ನು ಪ್ರಾಧಿಕಾರದ ವತಿಯಿಂದ ಭರಿಸತಕ್ಕದ್ದು.
2) ಈ ಕಾಮಗಾರಿಯನ್ನು ರೂ. 258 ಕೋಟಿಗಳ ಮಿತಿಯಲ್ಲಿಯೇ ಯಾವುದೇ ಹೆಚ್ಚುವರಿಯಾಗದಂತೆ ಅನುಷ್ಠಾನಗೊಳಿಸತಕ್ಕದ್ದು.
3) ಈ ಕಾಮಗಾರಿಯ ಅಂದಾಜು ಪಟ್ಟಿಗೆ ಸಕ್ಷಮ ತಾಂತ್ರಿಕ ಪ್ರಾಧಿಕಾರದಿಂದ ತಾಂತ್ರಿಕ ಮಂಜೂರಾತಿಯನ್ನು ಪಡೆದುಕೊಂಡು, ನಂತರ ಟೆಂಡರ್ ಕರೆಯಲು ಕ್ರಮ ವಹಿಸತಕ್ಕದ್ದು.
4) ಈ ಕಾಮಗಾರಿಯ ಟೆಂಡರ್ ಪ್ರಕ್ರಿಯೆಗಳನ್ನು ಕೆ.ಟಿ.ಪಿ.ಪಿ. ಕಾಯ್ದೆ 1999 ಮತ್ತು ಕೆ.ಟಿ.ಪಿ.ಪಿ. ನಿಯಮಗಳು 2000 ಹಾಗೂ E-proc portal ಮುಖಾಂತರ ಕೈಗೊಂಡು ಟೆಂಡರ್‌ಗೆ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆದು, ನಂತರ ಮುಂದಿನ ಕ್ರಮ ವಹಿಸತಕ್ಕದ್ದು.
5) ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ ರವರು ಟೆಂಡರ್ ಪ್ರಕ್ರಿಯೆ ಪೂರ್ಣಗೊಂಡ ನಂತರ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕ ಕಾಯ್ದೆ ಮತ್ತು ನಿಯಮಗಳನ್ವಯ ಸರ್ಕಾರದ ಅನುಮೋದನೆ ಪಡೆದುಕೊಳ್ಳುವುದು.
6) ಈ ಯೋಜನೆಗೆ ಸಂಬಂಧಪಟ್ಟಂತೆ ಯೋಜನೆಗಳು ಜಾರಿ ಇರುವ ಪೂರ್ಣಾವಧಿಯಲ್ಲಿ ಗುಣಮಟ್ಟ ಹಾಗೂ ಪ್ರಮಾಣಗಳ ತಪಾಸಣೆಗಾಗಿ Third Party Consultants ಅನ್ನು ನೇಮಿಸಿಕೊಳ್ಳುವುದು.
7) ಯೋಜನೆಯಲ್ಲಿ ಯಾವುದೇ ಬದಲಾವಣೆ ಮಾಡಬೇಕಾದಲ್ಲಿ ಸರ್ಕಾರದ ಗಮನಕ್ಕೆ ತಂದು ಅಂತಹ ಬದಲಾವಣೆಗಳನ್ನು ನಿರ್ವಹಿಸುವ ಮುನ್ನ ಸರ್ಕಾರದ ಅನುಮೋದನೆ ಪಡೆದುಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 587 Exp-9 2014, ದಿನಾಂಕ : 08–12–2014ರಲ್ಲಿ ಅಭಿಪ್ರಾಯಿಸಿರುವಂತೆ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಜೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

P.R. 112

## ಕಾನೂನು ಸಚಿವಾಲಯ

**ವಿಷಯ :** 2014–15ನೇ ಸಾಲಿಗೆ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ಗೆ ಕಿರಿಯ ವಕೀಲರ ತರಬೇತಿ ಕಾರ್ಯಕ್ರಮಕ್ಕಾಗಿ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಅಧಿಸೂಚನೆ ಸಂಖ್ಯೆ : ಲಾ 210 ಎಲ್‌ಸಿಎಲ್ 2002, ದಿನಾಂಕ : 10–07–2003.

2. ಡೆಪ್ಯೂಟಿ ರಿಜಿಸ್ಟ್ರಾರ್, ಕರ್ನಾಟಕ ಉಚ್ಛ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ : ಹೆಚ್‌ಸಿಬಿ 230/Bar Council/1983, ದಿನಾಂಕ : 16–10–2014.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ : 10–07–2003ರ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿಗೆ (Bar Council) ರೂ. 9.80 ಲಕ್ಷಗಳನ್ನು ನಿಗಧಿಗೊಳಿಸಿ ವಕೀಲರುಗಳ ಸಂಘಗಳಿಗೆ ಸಹಾಯಾನುದಾನ ನಿಯಮಾವಳಿಗಳಿಗೆ ತಿದ್ದುಪಡಿ (Amendment) ತರಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ : 16–10–2014ರ ಪತ್ರದಲ್ಲಿ ಡೆಪ್ಯುಟಿ ರಿಜಿಸ್ಟ್ರಾರ್, ಕರ್ನಾಟಕ ಉಚ್ಛ ನ್ಯಾಯಾಲಯ, ಬೆಂಗಳೂರು ಇವರು ಕರ್ನಾಟಕ ರಾಜ್ಯ ವಕೀಲರ ಪರಿಷತ್‌ಗೆ 2014–15ನೇ ಸಾಲಿಗೆ ಕಿರಿಯ ವಕೀಲರಿಗೆ ಕಾನೂನು ಕಮ್ಮಟ/ಕಾರ್ಯಾಗಾರ, ವಿಚಾರ ಸಂಕಿರಣಗಳನ್ನು ಹಾಗೂ ಕಾನೂನು ಶಿಕ್ಷಣ ಕಾರ್ಯಕ್ರಮಗಳನ್ನು ನಡೆಸುವ ಸಲುವಾಗಿ ರೂ. 10.00 ಲಕ್ಷ ಸಹಾಯಾನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಪ್ರಸಕ್ತ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2014–00–800–4–00–059 (ಯೋಜನೇತರ) ರಡಿ ಒದಗಿಸಿರುವ ರೂ. 23.40 ಲಕ್ಷಗಳ ಆಯವ್ಯಯ ಅವಕಾಶವಿದ್ದು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆ ದಿನಾಂಕ : 10–07–2003ರ ತಿದ್ದುಪಡಿಯಲ್ಲಿ ಸದರಿ ಉದ್ದೇಶಕ್ಕಾಗಿ ರೂ. 9.80 ಲಕ್ಷಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 410 ಎಲ್‌ಸಿಎಲ್ 2014, ಬೆಂಗಳೂರು, ದಿನಾಂಕ : 23–01–2015.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿಗೆ (Bar Council) 2014–15ನೇ ಸಾಲಿಗೆ ರೂ. 9.80 ಲಕ್ಷಗಳ (ರೂಪಾಯಿ ಒಂಬತ್ತು ಲಕ್ಷದ ಎಂಬತ್ತು ಸಾವಿರ ಮಾತ್ರ) ಸಹಾಯಾನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ. ಸದರಿ ಮೊತ್ತವನ್ನು ಮೇಲಿನ ಉದ್ದೇಶಗಳಿಗಾಗಿ ಮಾತ್ರ ವಿನಿಯೋಗಿಸತಕ್ಕದ್ದು.

2014–15ನೇ ಬಿಡುಗಡೆ ಮಾಡಲಾಗುವ ಮೊತ್ತಕ್ಕೆ ಬಳಕೆಯ ಪ್ರಮಾಣ ಪತ್ರವನ್ನು (Utilization Certificate) ಅಡ್ವೋಕೇಟ್ ಜನರಲ್ (ಸಕ್ಷಮ ಪ್ರಾಧಿಕಾರ) ರವರ ಮೇಲು ರುಜುವಿನೊಂದಿಗೆ ಸಲ್ಲಿಸುವ ಷರತ್ತಿಗೊಳಪಟ್ಟಿದೆ. ಈ ಸಹಾಯಾನುದಾನವನ್ನು ಲೆಕ್ಕ ಶೀರ್ಷಿಕೆ 2014–00–800–4–00–059 (ಯೋಜನೇತರ) ಅಡಿಯಲ್ಲಿ ಒದಗಿಸಲಾದ ಹಣದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ವಸತಿ, ನಗರಾಭಿವೃದ್ಧಿ ಮತ್ತು ಕಾನೂನು ಹಾಗೂ ಇ–ಆಡಳಿತ ಇಲಾಖೆಯವರ ಟಿಪ್ಪಣಿ ಸಂಖ್ಯೆ : ವನಇ 12 ಆಂಅಬಿ 2015, ದಿನಾಂಕ : 13–01–2015ರ ಸಹಮತಿ ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಯೀದಾ ಬಾನು**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ–2).

P.R. 113

SC-25

## ಕಂದಾಯ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಕಂಇ 99 ಎಲ್‌ಜಿಎಲ್ 2012, ಬೆಂಗಳೂರು, ದಿನಾಂಕ : 12–01–2015**

ಸರ್ಕಾರದ ಆದೇಶ ಸಂಖ್ಯೆ : ಕಂಇ 99 ಎಲ್‌ಜಿಎಲ್ 2012, ದಿನಾಂಕ : 30–12–2014ರಂದು ಹೊರಡಿಸಿರುವ ಆದೇಶದಲ್ಲಿ ಓದಲಾಗಿದೆ ಭಾಗದ ಕ್ರಮ ಸಂಖ್ಯೆ (1)ರಲ್ಲಿ ಹಾಗೂ ಪ್ರಸ್ತಾವನೆಯ ಎರಡನೇ ಖಂಡಿಕೆಯ ಮೊದಲನೇ ಸಾಲಿನಲ್ಲಿ "**ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು**" ಈ ಪದಗಳ ಬದಲಾಗಿ "**ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ**" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಹಾಂತೇಗೌಡ ಎಸ್.ಎಲ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂಜೂರಾತಿ–3).

P.R. 114

SC-25

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಸಚಿವಾಲಯ

**ವಿಷಯ :** ಶ್ರೀ ಜಚನಿ ಅಧ್ಯಯನ ಪೀಠ ಮತ್ತು ಸಂಶೋಧನ ಸಂಸ್ಥೆಯ ನಿರ್ಮಾಣಕ್ಕೆ ಅನುದಾನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 163 ಕಸಧ 2011, ದಿನಾಂಕ : 23–03–2011.

**ಪ್ರಸ್ತಾವನೆ :**

ಶ್ರೀ ಜಚನಿ ರವರ ಶತಮಾನೋತ್ಸವ ಸ್ಮರಣಾರ್ಥ ಬೆಂಗಳೂರಿನಲ್ಲಿ ಜಚನಿ ಅಧ್ಯಯನ ಪೀಠದ ಕಟ್ಟಡ ನಿರ್ಮಾಣಕ್ಕೆ ಹಾಗೂ ಇತರೆ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಶ್ರೀ ನಿಡುಮಾಮಿಡಿ ಜಗದ್ಗುರು ಮಠ, ಗೂಳುರು ಮಹಾಸಂಸ್ಥಾನಕ್ಕೆ ರೂ. 1.00 ಕೋಟಿಗಳನ್ನು ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುತ್ತದೆ. ಹಣ ಕೊರತೆಯಿಂದ ಕಟ್ಟಡ ನಿರ್ಮಾಣ ಕಾರ್ಯವು ಅಪೂರ್ಣವಾಗಿದ್ದು, ಸದರಿ ಕಟ್ಟಡ ನಿರ್ಮಾಣ ಕಾಮಗಾರಿಗೆ ಅನುದಾನ ಬಿಡುಗಡೆಗೆ ಕೋರಿ ಸರ್ಕಾರದಲ್ಲಿ ಪ್ರಸ್ತಾವನೆ ಸ್ವೀಕೃತವಾಗಿರುತ್ತದೆ. ಶ್ರೀ ಜಚನಿ ಅಧ್ಯಯನ ಪೀಠ ಮತ್ತು ಸಂಶೋಧನ ಸಂಸ್ಥೆಯ ನಿರ್ಮಾಣಕ್ಕೆ ಅನುದಾನ ನೀಡಲು ನಿರ್ಣಯಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 828 ಕಸಧ 2014, ಬೆಂಗಳೂರು, ದಿನಾಂಕ : 20–10–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಚನಿ ರವರ ಶತಮಾನೋತ್ಸವ ಸ್ಮರಣಾರ್ಥ ಬೆಂಗಳೂರಿನಲ್ಲಿ ಜಚನಿ ಅಧ್ಯಯನ ಪೀಠದ ಕಟ್ಟಡ ನಿರ್ಮಾಣಕ್ಕೆ ಹಾಗೂ ಇತರೆ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಶ್ರೀ ನಿಡುಮಾಮಿಡಿ ಜಗದ್ದುರು ಮಠ, ಗೂಳುರು ಮಹಾಸಂಸ್ಥಾನಕ್ಕೆ 75,00,000/–ಲಕ್ಷ (ಎಪ್ಪತ್ತೈದು ಲಕ್ಷ ರೂಪಾಯಿ ಮಾತ್ರ) ಗಳನ್ನು ಪೂಜ್ಯ ಶ್ರೀ ವೀರಭದ್ರ ಚನ್ನಮಲ್ಲ ಮಹಾಸ್ವಾಮಿಗಳು, ಶಿವಾಯಿತ ಧರ್ಮಕೇಂದ್ರ, ನಿಡುಮಾಮಿಡಿ ಮಠ, ನಂ. 49/1, ಹೆಚ್.ಬಿ. ಸಮಾಜ ರಸ್ತೆ, ಬಸವನಗುಡಿ, ಬೆಂಗಳೂರು ಇವರಿಗೆ ಕೆಳಕಂಡ ಷರತ್ತಿಗೆ ಒಳಪಟ್ಟು ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ರವರಿಗೆ ಮಂಜೂರಾತಿ ನೀಡಿದೆ.

**ಷರತ್ತುಗಳು :**

1. ಈ ಕಾಮಗಾರಿಗೆ ಸಕ್ಷಮ ಪ್ರಾಧಿಕಾರದಿಂದ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ಪಡೆಯುವುದು.
2. ಬಿಡುಗಡೆ ಮಾಡಲಾದ ಅನುದಾನವನ್ನು ಉದ್ದೇಶಿತ ಕಾಮಗಾರಿಗಳಿಗೆ ಮಾತ್ರ ಬಳಸತಕ್ಕದ್ದು.
3. ಬಿಡುಗಡೆ ಮಾಡಲಾದ ಅನುದಾನ ಸಮರ್ಪಕವಾಗಿ ಬಳಕೆಯಾದ ಬಗ್ಗೆ ಹಣಬಳಕೆ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸುವುದು.

ಇದಕ್ಕೆ ತಗಲುವ ವೆಚ್ಚವನ್ನು 2014–15ನೇ ಸಾಲಿನ ಲೆಕ್ಕಶೀರ್ಷಿಕೆ 2205–00–102–4–31–059 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 668 ವೆಚ್ಚ–7/2014 ದಿನಾಂಕ : 18–09–2014ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 115

**ಮಂಜುಳ ಸಿ.**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಲ್.ಎಸ್. ಚಂದ್ರಶೇಖರರಾವ್, ನಿವೃತ್ತ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರು ಸಲ್ಲಿಸಿದ ಮೇಲ್ಮನವಿ–ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 17 ಸೇಇವಿ 2011, ದಿನಾಂಕ : 31–07–2014.

2. ಅಧಿಕಾರಿಯವರು ಸಲ್ಲಿಸಿರುವ ದಿನಾಂಕ : 30–10–2014ರ ಮೇಲ್ಮನವಿ.

**ಪ್ರಸ್ತಾವನೆ :**

ಶ್ರೀ ಎಲ್.ಎಸ್. ಚಂದ್ರಶೇಖರರಾವ್, ನಿವೃತ್ತ ಅಧೀನ ಕಾರ್ಯದರ್ಶಿ, ಇವರು ಸಿ.ಆ.ಸು.ಇ. (ಆಡಳಿತ ಸುಧಾರಣೆ–ರಾಜಕೀಯ ವಿಶ್ರಾಂತಿ ವೇತನ–1) ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ರಾಜಕೀಯ ವಿಶ್ರಾಂತಿ ವೇತನ (ಎ ಮತ್ತು ಬಿ) ಶಾಖೆಗಳಿಗೆ ಸಂಬಂಧಿಸಿದಂತೆ 'ಬಿ' 'ಸಿ' ಮತ್ತು 'ಡಿ' ವೃಂದದಲ್ಲಿ ಮುಕ್ತಾಯಗೊಂಡ ಸುಮಾರು 2100 ಕಡತಗಳನ್ನು ಸಾರ್ವತ್ರಿಕ ದಾಖಲೆಗಳ ವಿಭಾಗಕ್ಕೆ ರವಾನಿಸದೆ ಅವುಗಳನ್ನು ಶಾಖೆಯ ಹಂತದಲ್ಲಿಯೇ ನಾಶಗೊಳಿಸಿ ಸಚಿವಾಲಯ ಕೈಪಿಡಿಯ ಕಂಡಿಕೆ 244 ಮತ್ತು 252ರ ಸೂಚನೆಗಳನ್ನು ಪಾಲಿಸದೆ ಕರ್ತವ್ಯ ಲೋಪ ಎಸಗಿ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡಿರುವುದು ಇಲಾಖಾ ವಿಚಾರಣೆಯಲ್ಲಿ ಸಾಬೀತಾದ ಹಿನ್ನೆಲೆಯಲ್ಲಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದನ್ವಯ ಕ.ನಾ.ಸೇ. ನಿಯಮಾವಳಿಗಳು 1958ರ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಲ್.ಎಸ್. ಚಂದ್ರಶೇಖರರಾವ್, ನಿವೃತ್ತ ಅಧೀನ ಕಾರ್ಯದರ್ಶಿ ಇವರು ಎಸಗಿರುವ ಗಂಭೀರ ಸ್ವರೂಪದ ಕರ್ತವ್ಯಚ್ಯುತಿಗೆ ಸದರಿಯವರಿಗೆ ಅವರ ವಿಶ್ರಾಂತಿ ವೇತನದಲ್ಲಿ ಮಾಹೆಯಾನ

ರೂ. 2,000/– ಗಳನ್ನು (ಎರಡು ಸಾವಿರ ರೂಪಾಯಿಗಳು ಮಾತ್ರ) ಆದೇಶ ಹೊರಡಿಸಿದ ದಿನಾಂಕದಿಂದ 5 ವರ್ಷಗಳ ಅವಧಿಯವರೆಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿರುತ್ತದೆ.

ಸದರಿ ಆದೇಶದ ವಿರುದ್ಧ ಆರೋಪಿತ ಅಧಿಕಾರಿಯವರು ಮೇಲೆ ಓದಲಾದ (2)ರಲ್ಲಿ ಮೇಲ್ಮನವಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಶಾಖೆಗಳಲ್ಲಿನ ಕಡತಗಳ ವಿಲೇವಾರಿಯ ಕರ್ತವ್ಯವು ಶಾಖಾಧಿಕಾರಿಗಳದ್ದಾಗಿದ್ದು ತಮ್ಮ ಕರ್ತವ್ಯದ ಅವಧಿಯಲ್ಲಿ ಮುಕ್ತಾಯಗೊಂಡ ಯಾವುದೇ ವೃಂದದ ಕಡತಗಳನ್ನು ನಾಶ ಪಡಿಸಲಾಗಿರುವುದಿಲ್ಲವೆಂದು ತಿಳಿಸುತ್ತಾ, ಸಾರ್ವತ್ರಿಕ ದಾಖಲೆಗಳ ವಿಭಾಗವು ಆಯಾ ಇಲಾಖೆಗಳ 'ಬಿ' ಮತ್ತು 'ಸಿ' ವೃಂದದ ಕಡತಗಳನ್ನು ಇಲಾಖೆಗಳಿಗೆ ಕಳುಹಿಸಿ ಅವುಗಳನ್ನು ಪರಿಶೀಲಿಸಿ ಅವಶ್ಯಕತೆ ಇರುವ ಕಡತಗಳನ್ನು ಮಾತ್ರವೇ ದಾಖಲೆಗಳ ವಿಭಾಗಕ್ಕೆ ಮರಳಿ ಕಳುಹಿಸುವಂತೆ ಹಾಗೂ ಅವಧಿ ಮೀರಿರುವ ಕಡತಗಳನ್ನು ಇಲಾಖೆಯ ಹಂತದಲ್ಲಿಯೇ ನಾಶ ಪಡಿಸುವಂತೆ ಸೂಚಿಸಿ ಕಳುಹಿಸಿದ್ದ ಕಡತಗಳ ಬಗ್ಗೆ ಹಿಂದಿನ ಯಾವುದೇ ಅಧೀನ ಕಾರ್ಯದರ್ಶಿ/ಶಾಖಾಧಿಕಾರಿಗಳು ಕ್ರಮ ಕೈಗೊಳ್ಳದೇ ಇದ್ದುದರಿಂದ ಶಾಖೆಯಲ್ಲಿ ಕಡತಗಳು ಹೆಚ್ಚಾಗಿದ್ದುದರಿಂದ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಸಲಹೆ–ಸೂಚನೆಗಳ ಮೇರೆಗೆ ಹಾಗೂ ಸಿಬ್ಬಂದಿ ಸಭೆಯಲ್ಲಿ ತೀರ್ಮಾನಿಸಿದ ಮೇರೆಗೆ ಅವಧಿ ಮೀರಿದ ಹಾಗೂ ಅವಶ್ಯಕತೆ ಇಲ್ಲದಿರುವ ಕಡತಗಳನ್ನು ಮಾತ್ರವೇ ನಾಶಪಡಿಸಲಾಗಿದೆಯೆಂದು ತಿಳಿಸುತ್ತಾ, ಈ ಹಂತದಲ್ಲಿ ಸರ್ಕಾರಕ್ಕೆ ಅಧಿಕವಾಗಿ ಆರ್ಥಿಕ ನಷ್ಟವುಂಟು ಮಾಡಿದ ಅಧಿಕಾರಿ/ನೌಕರರುಗಳ ಪ್ರಕರಣವು ಬೆಳಕಿಗೆ ಬಂದಿದ್ದು, 'ಬಿ' ಮತ್ತು 'ಸಿ' ವೃಂದದ ಕಡತಗಳಲ್ಲಿ ಅವಧಿ ಮೀರಿದ ಹಾಗೂ ಅವಶ್ಯಕತೆಯಿಲ್ಲದ ಕಡತಗಳನ್ನು ಮಾತ್ರವೇ ನಾಶಪಡಿಸಿ ಉಳಿದವುಗಳನ್ನು ಅಭಿಲೇಖನಾಲಯಕ್ಕೆ ಕಳುಹಿಸಿದ ಕಾರಣದಿಂದಲೆ ಸರ್ಕಾರದಲ್ಲಿ ನಡೆದಿರುವ ಅತಿ ದೊಡ್ಡ ಮಟ್ಟದ ಭ್ರಷ್ಟಾಚಾರದ ಪ್ರಕರಣವನ್ನು ಬೆಳಕಿಗೆ ತಂದ ತಮಗೆ ಪ್ರಶಂಸಾ ಪತ್ರವನ್ನು ನೀಡುವ ಬದಲು ವಿಶ್ರಾಂತಿ ವೇತನದಲ್ಲಿ ಮಾಹೆಯಾನ ರೂ. 2,000/–ಗಳನ್ನು (ಎರಡು ಸಾವಿರ ರೂಪಾಯಿಗಳು ಮಾತ್ರ) ಆದೇಶ ಹೊರಡಿಸಿದ ದಿನಾಂಕದಿಂದ 5 ವರ್ಷಗಳ ಅವಧಿಯವರೆಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಿರುವುದು ಕೆಲವು ಪಟ್ಟಭದ್ರ ಹಿತಾಸಕ್ತಿಗಳ ಕೈವಾಡವನ್ನು ಸೂಚಿಸುತ್ತದೆಯೆಂದು ತಿಳಿಸುತ್ತಾ, ಈ ಪ್ರಕರಣದಲ್ಲಿ ಯಾವುದೇ ರೀತಿಯಲ್ಲೂ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲ ಹಾಗೂ ತಮ್ಮ ನಡತೆಯ ಭ್ರಷ್ಟತೆ ಉಂಟಾಗಿರುವುದಿಲ್ಲವೆಂದು ತಿಳಿಸಿ ತಮಗೆ ವಿಧಿಸಿರುವ ದಂಡನಾದೇಶವನ್ನು ಹಿಂಪಡೆದು, ತಮ್ಮ ನಿವೃತ್ತಿ ಜೀವನವನ್ನು ನೆಮ್ಮದಿಯಿಂದ ನಡೆಸಲು ಅವಕಾಶ ಮಾಡಿಕೊಡಬೇಕೆಂದು ಕೋರಿರುತ್ತಾರೆ.

ಅಧಿಕಾರಿಯವರು ಸಲ್ಲಿಸಿರುವ ಮೇಲ್ಮನವಿಯಂತೆ ಪ್ರಕರಣವನ್ನು ಸರ್ಕಾರವು ಪುನರ್ ಪರಿಶೀಲಿಸಿದ್ದು, ಶ್ರೀ ಎಲ್.ಎಸ್. ಚಂದ್ರಶೇಖರ ರಾವ್, ನಿವೃತ್ತ ಅಧೀನ ಕಾರ್ಯದರ್ಶಿ, ಇವರು ಸಿ.ಆ.ಸು.ಇ. (ಆಡಳಿತ ಸುಧಾರಣೆ–ರಾಜಕೀಯ ವಿಶ್ರಾಂತಿ ವೇತನ–1) ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ರಾಜಕೀಯ ವಿಶ್ರಾಂತಿ ವೇತನ (ಎ ಮತ್ತು ಬಿ) ಶಾಖೆಗಳಿಗೆ ಸಂಬಂಧಿಸಿದಂತೆ ಬಿ.ಸಿ ಮತ್ತು ಡಿ ವೃಂದದಲ್ಲಿ ಮುಕ್ತಯಗೊಂಡು ಸುಮಾರು 2100 ಕಡತಗಳನ್ನು ಸಾರ್ವತ್ರಿಕ ದಾಖಲೆಗಳ ವಿಭಾಗಕ್ಕೆ ರವಾನಿಸದೆ ಅವುಗಳನ್ನು ಶಾಖೆಯ ಹಂತದಲ್ಲಿಯೇ ನಾಶಗೊಳಿಸಿ ಸಚಿವಾಲಯ ಕೈಪಿಡಿಯ ಕಂಡಿಕೆ 244 ಮತ್ತು 252ರ ಸೂಚನೆಗಳನ್ನು ಪಾಲಿಸದೆ ಕರ್ತವ್ಯ ಲೋಪ ಎಸಗಿ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳ ನಿಯಮ 11ರನ್ವಯ ಆರೋಪ ಪಟ್ಟಿಯನ್ನು ಜಾರಿ ಮಾಡಿ, ಅದಕ್ಕೆ ಅವರು ನೀಡಿದ ವಿವರಣೆಯು ತೃಪ್ತಿಕರವಾಗಿಲ್ಲದಿದ್ದುದರಿಂದ ವಿಚಾರಣಾಧಿಕಾರಿಗಳನ್ನು ನೇಮಿಸಿ ನಿಯಮಾನುಸಾರವಾಗಿ ಇಲಾಖಾ ವಿಚಾರಣೆಯನ್ನು ನಡೆಸಲಾಗಿರುತ್ತದೆ.

ವಿಚಾರಣಾಧಿಕಾರಿಗಳು ಆರೋಪಿತ ಅಧಿಕಾರಿಯ ವಿರುದ್ಧ ಮಾಡಲಾಗಿದ್ದ ಆರೋಪವು ಸಂಪೂರ್ಣವಾಗಿ ಸಾಬೀತಾಗಿರುತ್ತದೆಂದು ನಿರ್ಣಯಿಸಿ ವಿಚಾರಣಾ ವರದಿಯನ್ನು ನೀಡಿದ್ದರಿಂದ ಈ ವರದಿಯನ್ನು ಎರಡನೇ ಕಾರಣ ಕೇಳುವ ನೋಟೀಸಿನೊಂದಿಗೆ ಅಧಿಕಾರಿಯವರಿಗೆ ನೀಡಿ, ಅವರಿಂದ ವಿವರಣೆ ಪಡೆದು, ಅದನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಶ್ರೀಯುತರು ಎರಡನೇ ಕಾರಣ ಕೇಳುವ ನೋಟೀಸ್‌ಗೆ ನೀಡಿದ ಉತ್ತರವು ಮೊದಲನೇ ಕಾರಣ ಕೇಳುವ ನೋಟೀಸಿಗೆ ನೀಡಿದ ಉತ್ತರ ಹಾಗೂ ಇಲಾಖಾ ವಿಚಾರಣಾಧಿಕಾರಿಗಳಿಗೆ ವಿಚಾರಣೆಯಲ್ಲಿ ನೀಡಿದ ಉತ್ತರಕ್ಕಿಂತ ಭಿನ್ನವಾಗಿರಲಿಲ್ಲವಾದ್ದರಿಂದ ಹಾಗೂ ಅಧಿಕಾರಿಯವರು ಇದರಲ್ಲಿ ಯಾವುದೇ ಹೊಸ ಅಂಶವನ್ನಾಗಲೀ, ಮಾಹಿತಿಯನ್ನಾಗಲೀ ನೀಡಿರಲಿಲ್ಲವಾದ್ದರಿಂದ ವಿಚಾರಣಾಧಿಕಾರಿಯು ನೀಡಿದ ವರದಿಯನ್ನು ಅಂಗೀಕರಿಸಲು ತೀರ್ಮಾನಿಸಿದ ಸರ್ಕಾರವು ಕಡತಗಳನ್ನು ಸಾರ್ವತ್ರಿಕ ದಾಖಲೆಗಳ ವಿಭಾಗಕ್ಕೆ ಕಳುಹಿಸದೆ ತಮ್ಮ ಹಂತದಲ್ಲಿಯೇ ನಾಶಪಡಿಸಿ ಪ್ರಮುಖ ಕಡತಗಳು ಲಭ್ಯವಿಲ್ಲದಂತೆ ಮಾಡಿ ಗಂಭೀರ ಸ್ವರೂಪವಾದ ಕರ್ತವ್ಯ ಲೋಪವನ್ನು ಎಸಗಿದ್ದರಿಂದ ಅಧಿಕಾರಿಯವರಿಗೆ ದಂಡನೆ ನೀಡಲು ತೀರ್ಮಾನಿಸಿ, ವಿಚಾರಣೆ ಮುಗಿಯುವರಷ್ಟರಲ್ಲಿ ಅಧಿಕಾರಿಯವರು ಸೇವೆಯಿಂದ ನಿವೃತ್ತಿ ಹೊಂದಿದ್ದು, ಅವರಿಗೆ ಕ.ನಾ.ಸೇ. (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 8ರಲ್ಲಿ ನಿರ್ದಿಷ್ಟ ಪಡಿಸಿರುವ ಯಾವುದೇ ದಂಡನೆಯನ್ನು ವಿಧಿಸಲು ಅವಕಾಶವಿಲ್ಲದಿದ್ದುದರಿಂದ ಕ.ನಾ.ಸೇ. ನಿಯಮಗಳು 214(1)(ಎ) ಅನ್ವಯ ಶ್ರೀ ಎಲ್.ಎಸ್. ಚಂದ್ರಶೇಖರರಾವ್, ನಿವೃತ್ತ ಅಧೀನ ಕಾರ್ಯದರ್ಶಿ, ಇವರ ನಿವೃತ್ತಿ ವೇತನದಲ್ಲಿ ಪ್ರತಿ ತಿಂಗಳು 2,000/– ರೂ.ಗಳನ್ನು ಆದೇಶ ಹೊರಡಿಸಿದ ದಿನಾಂಕದಿಂದ 5 ವರ್ಷಗಳ ಅವಧಿಯವರೆಗೆ ತಡೆ ಹಿಡಿಯುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ದಿನಾಂಕ : 31–7–2014ರಂದು ಈ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಮೇಲೆ ವಿವರಿಸಿದಂತೆ ಶ್ರೀ ಎಲ್.ಎಸ್. ಚಂದ್ರಶೇಖರರಾವ್, ನಿವೃತ್ತ ಅಧೀನ ಕಾರ್ಯದರ್ಶಿ ಇವರು ಸಿ.ಆ.ಸು.ಇ. (ಆಡಳಿತ ಸುಧಾರಣೆ–ರಾಜಕೀಯ ವಿಶ್ರಾಂತಿ ವೇತನ–1) ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಕರ್ತವ್ಯ ಲೋಪಕ್ಕೆ ನಿಯಮಾನುಸಾರವಾಗಿ ಕ್ರಮ ಕೈಗೊಂಡು ದಂಡನೆಯನ್ನು ವಿಧಿಸಿರುವುದರಿಂದ ಹಾಗೂ ಅಧಿಕಾರಿಯವರು ಸಲ್ಲಿಸಿರುವ ಮೇಲ್ಮನವಿಯೊಂದಿಗೆ ತಮ್ಮ ವಿರುದ್ಧ ದಂಡನಾದೇಶವನ್ನು ಹೊರಡಿಸುವ ಕಾಲದಲ್ಲಿ ಹಾಜರು ಪಡಿಸದಿದ್ದ/ಲಭ್ಯವಿಲ್ಲದಿದ್ದ/ಪ್ರಕರಣದ ಸ್ವರೂಪವನ್ನು ಬದಲಾವಣೆ ಮಾಡುವ ಪರಿಣಾಮವುಳ್ಳ ಯಾವುದೇ ಸಾಕ್ಷಿ ಅಥವಾ ಹೊಸ ವಿಷಯ ಸಾಮಾಗ್ರಿಯನ್ನು ಸಲ್ಲಿಸದೇ ಇರುವುದರಿಂದ ಶ್ರೀ ಎಲ್.ಎಸ್. ಚಂದ್ರಶೇಖರರಾವ್, ನಿವೃತ್ತ ಅಧೀನ ಕಾರ್ಯದರ್ಶಿ ಇವರು ಸಲ್ಲಿಸಿರುವ ಮೇಲ್ಮನವಿಯನ್ನು ತಿರಸ್ಕರಿಸಿ ಇವರಿಗೆ ದಂಡನೆ ವಿಧಿಸಿ ಆದೇಶಿಸಿರುವ ಸರ್ಕಾರದ ಆದೇಶವನ್ನು ಎತ್ತಿ ಹಿಡಿಯಲು ಸರ್ಕಾರವು ನಿರ್ಧರಿಸಿರುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 17 ಸೇಇವಿ 2011, ಬೆಂಗಳೂರು, ದಿನಾಂಕ : 27ನೇ ಜನವರಿ, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಲ್.ಎಸ್. ಚಂದ್ರಶೇಖರರಾವ್, ನಿವೃತ್ತ ಅಧೀನ ಕಾರ್ಯದರ್ಶಿ ಇವರು ಸಲ್ಲಿಸಿದ್ದ ಮೇಲ್ಮನವಿಯೊಂದಿಗೆ ತಮ್ಮ ವಿರುದ್ಧ ದಂಡನಾದೇಶವನ್ನು ಹೊರಡಿಸುವ ಕಾಲದಲ್ಲಿ ಹಾಜರು ಪಡಿಸದಿದ್ದ/ಲಭ್ಯವಿಲ್ಲದಿದ್ದ/ಪ್ರಕರಣದ ಸ್ವರೂಪವನ್ನು ಬದಲಾವಣೆ ಮಾಡುವ ಪರಿಣಾಮವುಳ್ಳ ಯಾವುದೇ ಸಾಕ್ಷಿ ಅಥವಾ ಹೊಸ ವಿಷಯ ಸಾಮಾಗ್ರಿಯನ್ನು ಸಲ್ಲಿಸದೇ ಇರುವುದರಿಂದ ಶ್ರೀಯುತರು ಸಲ್ಲಿಸಿರುವ ದಿನಾಂಕ : 30–10–2014ರ ಮೇಲ್ಮನವಿಯನ್ನು ತಿರಸ್ಕರಿಸಿದೆ ಹಾಗೂ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 17 ಸೇಇವಿ 2011, ದಿನಾಂಕ : 31–7–2014ರಲ್ಲಿ ಕ.ನಾ.ಸೇ. ನಿಯಮಾವಳಿಗಳು 1958ರ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಲ್.ಎಸ್. ಚಂದ್ರಶೇಖರರಾವ್, ನಿವೃತ್ತ ಅಧೀನ ಕಾರ್ಯದರ್ಶಿ ಇವರು ಎಸಗಿರುವ ಗಂಭೀರ ಸ್ವರೂಪದ ಕರ್ತವ್ಯಚ್ಯುತಿಗೆ ಅವರ ವಿಶ್ರಾಂತಿ ವೇತನದಲ್ಲಿ ಮಾಹೆಯಾನ ರೂ. 2,000/–ಗಳನ್ನು (ಎರಡು ಸಾವಿರ ರೂಪಾಯಿಗಳು ಮಾತ್ರ) ಆದೇಶ ಹೊರಡಿಸಿದ ದಿನಾಂಕದಿಂದ 5 ವರ್ಷಗಳ ಅವಧಿಯವರೆಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಿರುವ ಸರ್ಕಾರದ ಆದೇಶವನ್ನು ಎತ್ತಿಹಿಡಿದಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿ.ಆ.ಸು. ಇಲಾಖೆ (ಸೇವೆಗಳು–6).

**P.R. 116**

## ಆರ್ಥಿಕ ಸಚಿವಾಲಯ

**ವಿಷಯ :** ಖಜಾನೆ ಇಲಾಖೆಯಲ್ಲಿ ಹೊಸದಾಗಿ ಸೃಜಿಸಿರುವ ಹೆಚ್ಚುವರಿ ನಿರ್ದೇಶಕರ ಹುದ್ದೆಗೆ ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ನಿಗದಿಪಡಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಆಇ 02 ಆಖಇ 2014 (ಭಾ), ದಿನಾಂಕ : 09–09–2014.

2. ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ 38 ಸೇನಿಇ 1996, ದಿನಾಂಕ : 01–08–1996.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 09–09–2014ರ ಸರ್ಕಾರಿ ಆದೇಶದಲ್ಲಿ ಖಜಾನೆ ಇಲಾಖೆಯಲ್ಲಿ ಎರಡು ಹೆಚ್ಚುವರಿ ನಿರ್ದೇಶಕರ ಹುದ್ದೆಗಳನ್ನು ಅಂದರೆ ಒಂದು ಹೆಚ್ಚುವರಿ ನಿರ್ದೇಶಕರು (ಆಡಳಿತ) ಹಾಗೂ ಒಂದು ಹೆಚ್ಚುವರಿ ನಿರ್ದೇಶಕರು (ತಾಂತ್ರಿಕ) ಹುದ್ದೆಗಳನ್ನು ವೇತನ ಶ್ರೇಣಿ ರೂ. 44250–60600ಯಲ್ಲಿ ಕ್ರಮವಾಗಿ ದಿನಾಂಕ : 01–01–2015ರಿಂದ ಹಾಗೂ 01–01–2016 ರಿಂದ ಜಾರಿಗೆ ಬರುವಂತೆ ಸೃಜಿಸಲಾಯಿತು. ಈ ಹುದ್ದೆಗಳನ್ನು ಖಜಾನೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವ ಮೂಲಕ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿ ತುಂಬಲು ಸಾಕಷ್ಟು ಕಾಲಾವಕಾಶ ಬೇಕಾಗಿರುವುದರಿಂದ ಈ ಹುದ್ದೆಗಳನ್ನು ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ನಿಗದಿಪಡಿಸಿ ತುಂಬಲು ಅವಕಾಶ ಕಲ್ಪಿಸಲು ಉದ್ದೇಶಿಲಾಗಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಸಾಮಾನ್ಯ ಸೇವೆಗಳು (ಟ್ರಜರಿ ಬ್ರಾಂಚ್) ನೇಮಕಾರಿ ನಿಯಮಗಳು, 1994ಕ್ಕೆ ಸೂಕ್ತ ತಿದ್ದುಪಡಿ ತರುವುದನ್ನು ಕಾಯ್ದಿರಿಸಿ, ಮೇಲೆ (2)ರಲ್ಲಿ ಓದಲಾದ ದಿನಾಂಕ : 01–08–1996 ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಗಳನ್ನು ಅಳವಡಿಸಿಕೊಂಡು ಕಾರ್ಯಕಾರಿ ಆದೇಶ ಹೊರಡಿಸುವ ಮೂಲಕ ಮೇಲ್ಕಂಡ ಹುದ್ದೆಗೆ ನೇಮಕಾತಿ ವಿಧಾನವನ್ನು ಜಾರಿಗೆ ತರಲು ಉದ್ದೇಶಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 02 ಆಖಇ 2014 (ಭಾ), ಬೆಂಗಳೂರು, ದಿನಾಂಕ : 21–01–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಖಜಾನೆ ಇಲಾಖೆಯಲ್ಲಿ ದಿನಾಂಕ : 09–09–2014ರ ಸರ್ಕಾರದ ಆದೇಶದಲ್ಲಿ ಎರಡು ಹೆಚ್ಚುವರಿ ನಿರ್ದೇಶಕರ ಹುದ್ದೆಗಳನ್ನು ವೇತನ ಶ್ರೇಣಿ ರೂ. 44250–60600ಯಲ್ಲಿ ಕ್ರಮವಾಗಿ ದಿನಾಂಕ : 01–01–2015 ರಿಂದ ಜಾರಿಗೆ ಬರುವಂತೆ 1 ಹುದ್ದೆ ಹಾಗೂ 01–01–2016 ರಿಂದ ಜಾರಿಗೆ ಬರುವಂತೆ 1 ಹುದ್ದೆಯನ್ನು ಸೃಜಿಸಿದ್ದು, ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವಂತೆ ನೇಮಕಾತಿ ಕಾರ್ಯ ವಿಧಾನವನ್ನು ನಿಗದಿಪಡಿಸಲಾಗಿದೆ.

1. ಈ ಕಾರ್ಯಕಾರಿ ಆದೇಶದ ಮೂಲಕ ನಿಗದಿಪಡಿಸಿದ ನೇಮಕಾತಿ ವಿಧಾನವು ಸದರಿ ಕಾರ್ಯಕಾರಿ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಆರು ತಿಂಗಳ ಕಾಲ ಮಾತ್ರ ಜಾರಿಯಲ್ಲಿರುತ್ತದೆ.
2. ಆರು ತಿಂಗಳ ಒಳಗಾಗಿ ಈ ನೇಮಕಾತಿ ಕಾರ್ಯ ವಿಧಾನವನ್ನು ಖಜಾನೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಿ ಅಳವಡಿಸತಕ್ಕದ್ದು.
3. ಆರು ತಿಂಗಳ ನಂತರ ಈ ಕಾರ್ಯಕಾರಿ ಆದೇಶವು ತನ್ನಿಂದ ತಾನೇ ರದ್ದಾಗುತ್ತದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ವಿಭಾಗವು ದಿನಾಂಕ : 06–01–2015ರ ಟಿಪ್ಪಣಿ ಸಂಖ್ಯೆ : ಸಿಆಸುಇ 197 ಸೇನಿಡಿ 2014 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ).

**ಸರ್ಕಾರದ ಆದೇಶ ಸಂಖ್ಯೆ : ಆಇ 02 ಆಖಇ 2014 (ಭಾ), ಬೆಂಗಳೂರು, ದಿನಾಂಕ : 21–01–2015.**

**ಅನುಬಂಧ**

| ಹುದ್ದೆಯ ಪದನಾಮ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ | ಕನಿಷ್ಠ ಅರ್ಹತೆ |
|---|---|---|---|
| ಖಜಾನೆ ಇಲಾಖೆಯ ಹೆಚ್ಚುವರಿ ನಿರ್ದೇಶಕರು ರೂ. 44250–60600 | 02 01–01–2015 ರಿಂದ ಜಾರಿಗೆ ಬರುವಂತೆ 1 ಹುದ್ದೆ<br>01–01–2016 ರಿಂದ ಜಾರಿಗೆ ಬರುವಂತೆ 1 ಹುದ್ದೆ | ಜಂಟಿ ನಿರ್ದೇಶಕರ ವೃಂದದಿಂದ ಬಡ್ತಿ ಮೂಲಕ | ಜಂಟಿ ನಿರ್ದೇಶಕರ ವೃಂದದಲ್ಲಿ ಕನಿಷ್ಠ 3 ವರ್ಷ ಅರ್ಹತಾದಾಯಕ ಸೇವೆಯನ್ನು ಸಲ್ಲಿಸಿರಬೇಕು.<br>ಪರಂತು 3 ವರ್ಷ ಅರ್ಹತಾದಾಯಕ ಸೇವೆ ಸಲ್ಲಿಸಿರುವ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ, ಒಂದು ವರ್ಷ ಅರ್ಹತಾದಾಯಕ ಸೇವೆ ಸಲ್ಲಿಸಿರುವ ಜಂಟಿ ನಿರ್ದೇಶಕರನ್ನು ಪರಿಗಣಿಸಬಹುದು. |

**ಎನ್. ಲಕ್ಷ್ಮಣ**

**P.R. 118**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ).

## ಕಂದಾಯ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಊರ್ಡಿಗೆರೆ ಹೋಬಳಿ, ಕಾಡುಗುಜ್ಜನಹಳ್ಳಿ ಗ್ರಾಮದ ಸರ್ವೆ ನಂ. 28ರಲ್ಲಿ ಇರುವ ಶ್ರೀ ಆಂಜನೇಯಸ್ವಾಮಿ ದೇವಾಲಯವನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳುವ ಕುರಿತು.

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ : ಎಡಿಎಂ/08/(ಎ)/ಸಿಆರ್./07/2012–13, ದಿನಾಂಕ : 22–12–2014.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ದಿನಾಂಕ : 22–12–2014ರ ಪತ್ರದಲ್ಲಿ ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಊರ್ಡಿಗೆರೆ ಹೋಬಳಿ, ಕಾಡುಗುಜ್ಜನಹಳ್ಳಿ ಗ್ರಾಮದ ಸರ್ವೆ ನಂ. 28ರಲ್ಲಿ ಇರುವ ಶ್ರೀ ಆಂಜನೇಯಸ್ವಾಮಿ ದೇವಾಲಯವನ್ನು ಸರ್ಕಾರಿ ಜಾಗದಲ್ಲಿ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆಯದೆ ಅನಧಿಕೃತವಾಗಿ ನಿರ್ಮಿಸಲಾಗಿದೆ ಮತ್ತು ದೇವಾಲಯದ ಆದಾಯವನ್ನು ದುರುಪಯೋಗಪಡಿಸಿಕೊಳ್ಳುತ್ತಿರುವ ಕುರಿತು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಿಸಿದ ರಿಟ್ ಅರ್ಜಿ ಸಂಖ್ಯೆ : 30169/2012ರ ನಿರ್ದೇಶನದಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆಯಲ್ಲಿ ವಿಚಾರಣೆಯನ್ನು ನಡೆಸಿ, ಅಧಿನಿಯಮ, 1997ರ 43(6)ರನ್ವಯ ತುಮಕೂರು ಉಪವಿಭಾಗಾಧಿಕಾರಿಗಳನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಉಪವಿಭಾಗಾಧಿಕಾರಿಗಳು, ತುಮಕೂರು ಉಪವಿಭಾಗ ಇವರು ವಿಚಾರಣೆ ನಡೆಸಿ, ಪ್ರಸ್ತಾಪಿತ ದೇವಾಲಯದ ಶ್ರೀ ಬಯಲಾಂಜನೇಯ ಸೇವಾ ಸಮಿತಿ, ಕಾಡುಗುಜ್ಜನಹಳ್ಳಿ ಈ ಸಮಿತಿಯು ಅನಧಿಕೃತವಾಗಿ ಸರ್ಕಾರಿ ಜಮೀನಿನಲ್ಲಿ ದೇವಾಲಯ ನಿರ್ಮಿಸಿ ದೇವಾಲಯಕ್ಕೆ ಬರುವ ಆದಾಯವನ್ನು ದುರುಪಯೋಗಪಡಿಸಿಕೊಂಡಿರುವುದಲ್ಲದೇ ದೇವಾಲಯದ ಆಡಳಿತವನ್ನು ಅವ್ಯವಸ್ಥಿತವಾಗಿ ನಿರ್ವಹಣೆ ಮಾಡಿರುವುದು ದೃಢಪಟ್ಟಿದೆ. ಆದುದರಿಂದ ಸದರಿ ದೇವಾಲಯದ ಆಡಳಿತವನ್ನು ಸರ್ಕಾರದ ವಶಕ್ಕೆ ಪಡೆಯಬಹುದಾಗಿದೆ ಎಂದು ವರದಿ ಸಲ್ಲಿಸಿರುತ್ತಾರೆ.

ಅದರಂತೆ, ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಊರ್ಡಿಗೆರೆ ಹೋಬಳಿ, ಕಾಡುಗುಜ್ಜನಹಳ್ಳಿ ಗ್ರಾಮದ ಸರ್ವೆ ನಂ. 28ರಲ್ಲಿರುವ ಶ್ರೀ ಆಂಜನೇಯಸ್ವಾಮಿ ದೇವಾಲಯವನ್ನು ಶ್ರೀ ಬಯಲಾಂಜನೇಯ ಸೇವಾ ಸಮಿತಿ, ಕಾಡುಗುಜ್ಜನಹಳ್ಳಿ ಸಮಿತಿಯವರು ಅನಧಿಕೃತವಾಗಿ ಸರ್ಕಾರಿ ಜಮೀನಿನಲ್ಲಿ ನಿರ್ಮಿಸಿದ್ದು, ದೇವಾಲಯದ ಆದಾಯವನ್ನು ದುರುಪಯೋಗಪಡಿಸಿಕೊಂಡಿರುವುದು ಮತ್ತು ನಿರ್ವಹಣೆಯನ್ನು ಅವ್ಯವಸ್ಥಿತವಾಗಿ ನಡೆಸಿರುವುದು ದೃಢಪಟ್ಟಿರುವುದರಿಂದ **"ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಕಾಯ್ದೆಯ ಸೆಕ್ಷನ್ 42 & 43 ರನ್ವಯ"** ಸರ್ಕಾರದ ವಶಕ್ಕೆ ಪಡೆದು ಘೋಷಿತ ಸಂಸ್ಥೆ ಎಂದು ಆದೇಶ ಹೊರಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 03 ಮುಆಬಿ 2015, ಬೆಂಗಳೂರು, ದಿನಾಂಕ : 23ನೇ ಜನವರಿ, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಊರ್ಡಿಗೆರೆ ಹೋಬಳೀ, ಕಾಡುಗುಜ್ಜನಹಳ್ಳಿ ಗ್ರಾಮದ ಸರ್ವೆ ನಂ. 28ರಲ್ಲಿ ಇರುವ ಶ್ರೀ ಆಂಜನೇಯಸ್ವಾಮಿ ದೇವಾಲಯವನ್ನು ಸರ್ಕಾರಿ ಜಾಗದಲ್ಲಿ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆಯದೆ ಅನಧಿಕೃತವಾಗಿ ನಿರ್ಮಿಸಲಾಗಿದೆ. ದೇವಾಲಯದ ಆದಾಯವನ್ನು ದುರುಪಯೋಗಪಡಿಸಿಕೊಂಡು ಮತ್ತು ಆಡಳಿತ ನಿರ್ವಹಣೆಯನ್ನು ಅವ್ಯವಸ್ಥಿತವಾಗಿ ನಿರ್ವಹಣೆ ಮಾಡಿರುವುದು ದೃಢಪಟ್ಟಿರುವುದುರಿಂದ **ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಅಧಿನಿಯಮ 1997ರ ಕಲಂ 42** ರನ್ವಯ ಘೋಷಿತ ಸಂಸ್ಥೆಯೆಂದು ಘೋಷಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ಜಯರಾಮೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ).

**P.R. 119**

**SC-25**

## ಕಂದಾಯ ಸಚಿವಾಲಯ

**ವಿಷಯ :** ರಾಯಚೂರು ಜಿಲ್ಲೆ, ಲಿಂಗಸುಗೂರು ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಕಂಇ 67 ಮುಸರ 2007, ದಿನಾಂಕ : 10–10–2008.

2. ಸರ್ಕಾರದ ಆದೇಶ ಸಂಖ್ಯೆ : ಕಂಇ 61 ಮುಆಬಿ 2013, ದಿನಾಂಕ : 17–01–2014.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 10–10–2008ರಲ್ಲಿ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ವಿಧಾನಸಭಾ ಕ್ಷೇತ್ರವಾರು ಆರಾಧನಾ ಸಮಿತಿಗಳನ್ನು ರಚಿಸಲು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 17–01–2014ರಲ್ಲಿ ರಾಜ್ಯದ ಎಲ್ಲಾ ವಿಧಾನಸಭಾ ಕ್ಷೇತ್ರಗಳಿಗೆ ಆಯಾಯ ವಿಧಾನಸಭಾ ಕ್ಷೇತ್ರದ ವಿಧಾನಸಭಾ ಸದಸ್ಯರನ್ನು ಅಧ್ಯಕ್ಷರನ್ನಾಗಿ ಹಾಗೂ ಅಧಿಕಾರಿಗಳನ್ನೊಳಗೊಂಡ ಆರಾಧನಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ. ಅದರಂತೆ ರಾಯಚೂರು ಜಿಲ್ಲೆ, ಲಿಂಗಸುಗೂರು ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 189 ಮುಸರ 2013, ಬೆಂಗಳೂರು, ದಿನಾಂಕ : 16ನೇ ಜನವರಿ, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಯಚೂರು ಜಿಲ್ಲೆ ಲಿಂಗಸುಗೂರು ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ನಾಲ್ಕು ಜನ ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

| | | |
|---|---|---|
| 1. | ಶ್ರೀ ವಿರೇಶ ತಂದೆ ಸಂಗಪ್ಪ ಸಕ್ರಿ, ಲಿಂಗಸುಗೂರು (ಸಾಮಾನ್ಯ) | ಸದಸ್ಯರು |
| 2. | ಶ್ರೀಮತಿ ಲಕ್ಷ್ಮೀಬಾಯಿ ಗಂಡ ಮಹಾಲಿಂಗಪ್ಪ, ಸಾ: ಚಿತ್ತಾಪೂರು (ಮಹಿಳೆ) | ಸದಸ್ಯರು |
| 3. | ಶ್ರೀ ಪ್ರಸಪ್ಪ ತಾಯಿ ತಿಮ್ಮವ್ವ, ಹಿರೇನಗನೂರು (ಪರಿಶಿಷ್ಟ ಜಾತಿ) | ಸದಸ್ಯರು |
| 4. | ಶ್ರೀ ಅಯ್ಯಪ್ಪ ತಂದೆ ಈರಪ್ಪ ತಳವರ, ಸಾ: ಗೆಜ್ಜಲಗುಟ್ಟಾ (ಪರಿಶಿಷ್ಟ ಪಂಗಡ) | ಸದಸ್ಯರು |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ : 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ಜಯರಾಮೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ).

**P.R. 120**

**SC-25**

## ಕಂದಾಯ ಸಚಿವಾಲಯ

**ವಿಷಯ :** ಹೆಚ್ಚುವರಿ ನಿರ್ದೇಶಕರು, ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ಹುದ್ದೆಯ ಕರ್ತವ್ಯ ಮತ್ತು ಜವಾಬ್ದಾರಿಗಳು.

**ಓದಲಾಗಿದೆ :** 1. ಆಯುಕ್ತರು, ಭೂಮಾಪನ ಇಲಾಖೆ ರವರ ಪತ್ರ ಸಂಖ್ಯೆ ಎಸ್‌ಎಸ್‌ಎಲ್‌ಆರ್/ಇಎಸ್‌ಟಿ/ಎಂಐಎಸ್‌ಸಿ/ ಎಂಐಎಸ್–050/14–15. ದಿನಾಂಕ : 17–7–2014.

2. ಸರ್ಕಾರದ ಆದೇಶ ಸಂಖ್ಯೆ : ಕಂಇ 30 ಭೂದಾಸೇ (1) 2014, ದಿನಾಂಕ : 20–11–2014 (ಕಾರ್ಯಕಾರಿ ಆದೇಶ).

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪ್ರಸ್ತಾವನೆಯಲ್ಲಿ, ಆಯುಕ್ತರು, ಭೂಮಾಪನ ಇಲಾಖೆರವರು ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯು ಸಾರ್ವಜನಿಕರ ಹಕ್ಕುದಾಖಲೆಗಳ–ಗಡಿ ಮತ್ತು ಎಲ್ಲೆಗಳ ನಿರ್ಮಾಣ ಮತ್ತು ನಿರ್ವಹಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದೆಯೆಂದು ತಿಳಿಸುತ್ತಾ ಭೂಮಾಪನ ಇಲಾಖೆಯು ಪ್ರಸ್ತುತ 7000 ಸಿಬ್ಬಂದಿಯನ್ನು ಹೊಂದಿದ್ದು, ಇದರಲ್ಲಿ ಪ್ರತಿ ಕಂದಾಯ ವಿಭಾಗದಲ್ಲಿಯೂ ಕನಿಷ್ಠ 2000 ಸಿಬ್ಬಂದಿ ಕಾರ್ಯ ನಿರ್ವಹಿಸುತ್ತಿದ್ದಾರೆಂದು ತಿಳಿಸಿರುತ್ತಾರೆ. ಭೂಮಾಪನ ಇಲಾಖೆಯು ಸಾರ್ವಜನಿಕರ ಕೋರಿಕೆಯ ಮೇರೆಗೆ ಅಳತೆ ಕಾರ್ಯವನ್ನು ನಗರಮಾಪನ ಯೋಜನೆ, ಮರುಭೂಮಾಪನ ಯೋಜನೆ, ಭೂದಾಖಲೆಗಳ ಸ್ಕ್ಯಾನಿಂಗ್ ಮತ್ತು ಡಿಜಿಟೈಸೇಷನ್, ಮೋಜಿಣಿ ತಂತ್ರಾಂಶ, ತತ್ಕಾಲ್ ಪೋಡಿ ಕಡತಗಳ ವಿಲೇವಾರಿ ಸರ್ಕಾರಿ ಜಮೀನುಗಳ ಒತ್ತುವರಿ ತೆರವುಗೊಳಿಸುವ ಕಾರ್ಯ, ನಗರಾಸ್ತಿ ಮಾಲೀಕತ್ವ ದಾಖಲೆಗಳು, ಪರವಾನಗಿ ಭೂಮಾಪಕರ ಯೋಜನಾ ಮೇಲುಸ್ತುವಾರಿ, ಸಕಾಲ ಯೋಜನೆಯ ಅನುಷ್ಠಾನ ಮತ್ತು ಆರ್.ಟಿ.ಸಿ. ತಿದ್ದುಪಡಿ ಕಾರ್ಯದಲ್ಲಿ ಸಹಕರಿಸುವಿಕೆ ಇತ್ಯಾದಿ ಕಾರ್ಯ/ಯೋಜನೆಗಳನ್ನು ನಿರ್ವಹಿಸುತ್ತಿದ್ದು. ಈ ಎಲ್ಲಾ ಯೋಜನೆಗಳನ್ನು ನೇರವಾಗಿ ಕೇಂದ್ರ ಕಛೇರಿಯಿಂದ ನಿರ್ವಹಿಸಲಾಗುತ್ತಿದ್ದು. ಈ ಯೋಜನೆಗಳ ಅನುಷ್ಠಾನದಲ್ಲಿನ ಗುಣಮಟ್ಟ, ನ್ಯೂನತೆ ಮತ್ತು ಪರಿಹಾರೋಪಾಯಗಳ ಬಗ್ಗೆ ಕೇಂದ್ರ ಕಛೇರಿಯಲ್ಲಿನ ಭೂದಾಖಲೆಗಳ ಜಂಟಿ ನಿರ್ದೇಶಕರು (ತಾಂತ್ರಿಕ), ಆಯುಕ್ತರಿಗೆ ಸಮನ್ವಯಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದು, ಸದರಿ ಅಧಿಕಾರಿಯು ಇಲಾಖೆಯ ಕ್ಷೇತ್ರಾಧಿಕಾರಿಯಾದ ಜಂಟಿ ನಿರ್ದೇಶಕರು, ಉಪ ನಿರ್ದೇಶಕರು, ಸಹಾಯಕ ನಿರ್ದೇಶಕರುಗಳ ನಡುವೆ ಸಮನ್ವಯಾಧಿಕಾರಿಯಾಗಿ ತಾಂತ್ರಿಕ ಮೇಲ್ವಿಚಾರಣೆಯನ್ನು ಮಾಡಬೇಕಾಗಿರುತ್ತದೆಯೆಂದು ತಿಳಿಸಿರುತ್ತಾರೆ.

ಮುಂದುವರೆದು, ಇಲಾಖೆಯಲ್ಲಿ ವಿಭಾಗಮಟ್ಟದ ಜಂಟಿ ನಿರ್ದೇಶಕರು ಹಾಗೂ ಕೇಂದ್ರ ಕಛೇರಿಯಲ್ಲಿನ ಜಂಟಿ ನಿರ್ದೇಶಕರು (ತಾಂತ್ರಿಕ) ಸಮಾನಾಂತರ ವೃಂದದ ಹುದ್ದೆಯ ಅಧಿಕಾರಿಗಳಾಗಿರುತ್ತಾರೆಂದು ತಿಳಿಸುತ್ತಾ. ಕೇಂದ್ರ ಕಛೇರಿಯ ಜಂಟಿ ನಿರ್ದೇಶಕರು, ವಿಭಾಗಮಟ್ಟದ ಜಂಟಿ ನಿರ್ದೇಶಕರುಗಳ ಮೇಲೆ ಆಡಳಿತಾತ್ಮಕವಾಗಿ, ತಾಂತ್ರಿಕವಾಗಿ ಮೇಲ್ವಿಚಾರಣೆಯನ್ನು ಮತ್ತು ನಿಯಂತ್ರಣವನ್ನು ಸಾಧಿಸಲು ಕಷ್ಟಸಾಧ್ಯವಾಗಿರುತ್ತದೆಂದು ತಿಳಿಸುತ್ತಾ, ಕೇಂದ್ರ ಕಛೇರಿಯಲ್ಲಿನ ವಿಶೇಷ ಜಿಲ್ಲಾಧಿಕಾರಿಗಳ ತತ್ಸಮಾನ ಹುದ್ದೆಯಾದ ಭೂದಾಖಲೆಗಳ ಜಂಟಿ ನಿರ್ದೇಶಕರು (ತಾಂತ್ರಿಕ) (ವೇತನ ಶ್ರೇಣಿ ರೂ. 40050–1050–45300–1200–52500–1350–56550) ಹುದ್ದೆಯನ್ನು ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ವೇತನ ಶ್ರೇಣಿಯಾದ ರೂ. 48900–1200–52500–1350–60600–1500–63600ಕ್ಕೆ ಉನ್ನತೀಕರಿಸಿ ಹೆಚ್ಚುವರಿ ನಿರ್ದೇಶಕರು (Additional Director) ಎಂದು ಮರುನಾಮೀಕರಿಸಲು ಹಾಗೂ ಈ ಹುದ್ದೆಯನ್ನು ಇಲಾಖೆಯ ಜ್ಯೇಷ್ಠತೆಯಲ್ಲಿ ಹಿರಿಯರಾದ ಭೂದಾಖಲೆಗಳ ಜಂಟಿ ನಿರ್ದೇಶಕರ ವೃಂದದ ಹುದ್ದೆಯಿಂದ ಮುಂಬಡ್ತಿ ನೀಡುವ ಮೂಲಕ ಭರ್ತಿ ಮಾಡುವಂತೆ ಹಾಗೂ ಈ ಕೆಳಕಂಡ ಪ್ರತ್ಯಾಯೋಜಿಸಬಹುದಾದ ಆಡಳಿತಾತ್ಮಕ ಮತ್ತು ಆರ್ಥಿಕ ಅಧಿಕಾರಗಳನ್ನು ನೀಡಬಹುದೆಂದು ತಿಳಿಸಿರುತ್ತಾರೆ.

**ಅ) ಆಡಳಿತಾತ್ಮಕ ಅಧಿಕಾರಗಳು :**

1. ತಾಂತ್ರಿಕ ತಪಾಸಕರ ಮತ್ತು ಅಧೀಕ್ಷಕರು ವೃಂದದ ಹುದ್ದೆಗಳಿಗೆ ನೇಮಕಾತಿ ಪ್ರಾಧಿಕಾರ.
2. ಮೈಸೂರು ಮತ್ತು ಗುಲ್ಬರ್ಗಾ ತರಬೇತಿ ಸಂಸ್ಥೆಗಳ ತರಬೇತಿ ಕಾರ್ಯಕ್ರಮಗಳನ್ನು ರೂಪಿಸಿ ಯೋಜಿಸುವುದು ಮತ್ತು ಅನುಷ್ಠಾನಗೊಳಿಸುವುದು.
3. ಕರ್ನಾಟಕ ಭೂಕಂದಾಯ ಅಧಿನಿಯಮದ ಸೆಕ್ಷನ್ 56 ರಡಿಯಲ್ಲಿ 2ನೇ ಮೇಲ್ಮನವಿ ಪ್ರಾಧಿಕಾರ.
4. ಪ್ರಾದೇಶಿಕ ಭೂದಾಖಲೆಗಳ ಜಂಟಿ ನಿರ್ದೇಶಕರ ಆದೇಶದ ವಿರುದ್ಧ ದ್ವಿತೀಯ ದರ್ಜೆಯ ವೃಂದದ ಸಿಬ್ಬಂದಿಗೆ ಮೇಲ್ಮನವಿ ಪ್ರಾಧಿಕಾರ.
5. ಇಲಾಖೆಯ ಯೋಜನೆಗಳ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುವುದು, ಯೋಜನೆಗಳನ್ನು ರೂಪಿಸುವುದು ಮತ್ತು ಅನುಷ್ಠಾನಗೊಳಿಸುವುದು.
6. ಸರ್ಕಾರ ಮತ್ತು ಇಲಾಖೆಯ ನಡುವೆ ಸಮನ್ವಯ (Laisioning) ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.
7. 'ಸಿ' ವೃಂದದ ಸಿಬ್ಬಂದಿಯ ಕಾರ್ಯನಿರ್ವಹಣಾ ವರದಿಗಳ ಸಂಬಂಧ ಅಂಗೀಕಾರ ಪ್ರಾಧಿಕಾರ
8. ನೇಮಕಾತಿ ಸಮಿತಿ ಮತ್ತು ಇಲಾಖಾ ಮುಂಬಡ್ತಿ ಸಮಿತಿ (DPC) ಗಳ ಸದಸ್ಯರಾಗಿ ಕಾರ್ಯನಿರ್ವಹಿಸುವುದು.
9. ಇಲಾಖೆಯ ಎಲ್ಲಾ ಕಛೇರಿಗಳ ತನಿಖೆ ನಡೆಸುವ ಪ್ರಾಧಿಕಾರ.
10. ನಗರಮಾಪನ ವಿಷಯಗಳ ಮೇಲ್ಮನವಿ ಪ್ರಾಧಿಕಾರ.
11. ಪರವಾನಗಿ ಭೂಮಾಪಕರ ನೇಮಕಾತಿ ಪ್ರಾಧಿಕಾರ.
12. ಅನ್ಯ ಸೇವೆ (Foreign Service) ಸಲ್ಲಿಸುತ್ತಿರುವ ಗ್ರೂಪ್ 'ಬಿ' ಅಧಿಕಾರಿಗಳ ಮತ್ತು ಗ್ರೂಪ್ 'ಸಿ' ನೌಕರರ ಸೇವಾವಿಷಯ.

**ಆ) ಆರ್ಥಿಕ ಅಧಿಕಾರಗಳು :**

ಸರ್ಕಾರದ ಆದೇಶ ಸಂಖ್ಯೆ : FD 7 DFP 91, ದಿನಾಂಕ : 16–09–1991 DPAR (BPE) 51 MEA 96, ದಿನಾಂಕ : 21–06–1996 ಮತ್ತು FD 1 FTP 91, ದಿನಾಂಕ : 02–02–2001 ರಂತೆ ವಿಭಾಗೀಯ ಮಟ್ಟದ ಅಧಿಕಾರಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರ ಮತ್ತು ಸರ್ಕಾರದ ಆದೇಶ ಸಂಖ್ಯೆ : FD 2 TFP 2010, ದಿನಾಂಕ : 30–04–2010 ರಂತೆ ಪ್ರತ್ಯಾಯೋಜಿಸಿರುವ ಸಾಮಾನ್ಯ ಆರ್ಥಿಕ ಅಧಿಕಾರ ಮತ್ತು ವಿಶೇಷ ಅಧಿಕಾರಗಳನ್ನು ಹೊಂದಿರುತ್ತಾರೆ.

ಮೇಲೆ ಓದಲಾದ (2)ರಲ್ಲಿ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿನ ಕೇಂದ್ರ ಕಛೇರಿಯ ಭೂದಾಖಲೆಗಳ ಜಂಟಿ ನಿರ್ದೇಶಕರು (ತಾಂತ್ರಿಕ) ಹುದ್ದೆಯನ್ನು ಹೆಚ್ಚುವರಿ ನಿರ್ದೇಶಕರು (Additional Dirctor) ಹುದ್ದೆಗೆ ವೇತನ ಶ್ರೇಣಿ ರೂ. 48900–63600 ರಲ್ಲಿ ಉನ್ನತೀಕರಿಸಿರುವುದರಿಂದ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 30 ಭೂದಾಸೇ (1) 2014, ಬೆಂಗಳೂರು, ದಿನಾಂಕ : 23–03–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿನ ಕೇಂದ್ರ ಕಛೇರಿಯಲ್ಲಿನ ಭೂದಾಖಲೆಗಳ ಜಂಟಿ ನಿರ್ದೇಶಕರು (ತಾಂತ್ರಿಕ) ರವರ ಹುದ್ದೆಯನ್ನು ಹೆಚ್ಚುವರಿ ನಿರ್ದೇಶಕರು (Additional Director) ಹುದ್ದೆಗೆ ವೇತನ ಶ್ರೇಣಿ ರೂ. 48900–63600 ರಲ್ಲಿ ಒಂದು ವರ್ಷದ ಅವಧಿಗೆ ಮಾತ್ರ ಉನ್ನತೀಕರಿಸಿ, ಈ ಕೆಳಕಂಡ ಆಡಳಿತಾತ್ಮಕ ಮತ್ತು ಆರ್ಥಿಕ ಅಧಿಕಾರಗಳನ್ನು ಪ್ರತ್ಯಾಯೋಜಿಸಿ ಆದೇಶಿಸಿದೆ.

**ಅ) ಆಡಳಿತಾತ್ಮಕ ಅಧಿಕಾರಗಳು :**

1. ತಾಂತ್ರಿಕ ತಪಾಸಕರ ಮತ್ತು ಅಧೀಕ್ಷಕರು ವೃಂದದ ಹುದ್ದೆಗಳಿಗೆ ನೇಮಕಾತಿ ಪ್ರಾಧಿಕಾರ.
2. ಮೈಸೂರು ಮತ್ತು ಗುಲ್ಬರ್ಗಾ ತರಬೇತಿ ಸಂಸ್ಥೆಗಳ ತರಬೇತಿ ಕಾರ್ಯಕ್ರಮಗಳನ್ನು ರೂಪಿಸಿ ಯೋಜಿಸುವುದು ಮತ್ತು ಅನುಷ್ಠಾನಗೊಳಿಸುವುದು.
3. ಕರ್ನಾಟಕ ಭೂಕಂದಾಯ ಅಧಿನಿಯಮದ ಸೆಕ್ಷನ್ 56 ರಡಿಯಲ್ಲಿ 2ನೇ ಮೇಲ್ಮನವಿ ಪ್ರಾಧಿಕಾರ.
4. ಪ್ರಾದೇಶಿಕ ಭೂದಾಖಲೆಗಳ ಜಂಟಿ ನಿರ್ದೇಶಕರ ಆದೇಶದ ವಿರುದ್ಧ ದ್ವಿತೀಯ ದರ್ಜೆಯ ವೃಂದದ ಸಿಬ್ಬಂದಿಗೆ ಮೇಲ್ಮನವಿ ಪ್ರಾಧಿಕಾರ.
5. ಇಲಾಖೆಯ ಯೋಜನೆಗಳ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುವುದು, ಯೋಜನೆಗಳನ್ನು ರೂಪಿಸುವುದು ಮತ್ತು ಅನುಷ್ಠಾನಗೊಳಿಸುವುದು.
6. ಸರ್ಕಾರ ಮತ್ತು ಇಲಾಖೆಯ ನಡುವೆ ಸಮನ್ವಯ (Laisioning) ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.
7. 'ಸಿ' ವೃಂದದ ಸಿಬ್ಬಂದಿಯ ಕಾರ್ಯನಿರ್ವಹಣಾ ವರದಿಗಳ ಸಂಬಂಧ ಅಂಗೀಕಾರ ಪ್ರಾಧಿಕಾರ
8. ನೇಮಕಾತಿ ಸಮಿತಿ ಮತ್ತು ಇಲಾಖಾ ಮುಂಬಡ್ತಿ ಸಮಿತಿ (DPC) ಗಳ ಸದಸ್ಯರಾಗಿ ಕಾರ್ಯನಿರ್ವಹಿಸುವುದು.
9. ಇಲಾಖೆಯ ಎಲ್ಲಾ ಕಛೇರಿಗಳ ತನಿಖೆ ನಡೆಸುವ ಪ್ರಾಧಿಕಾರ.
10. ನಗರಮಾಪನ ವಿಷಯಗಳ ಮೇಲ್ಮನವಿ ಪ್ರಾಧಿಕಾರ.
11. ಪರವಾನಗಿ ಭೂಮಾಪಕರ ನೇಮಕಾತಿ ಪ್ರಾಧಿಕಾರ.
12. ಅನ್ಯ ಸೇವೆ (Foreign Service) ಸಲ್ಲಿಸುತ್ತಿರುವ ಗ್ರೂಪ್ 'ಬಿ' ಅಧಿಕಾರಿಗಳ ಮತ್ತು ಗ್ರೂಪ್ 'ಸಿ' ನೌಕರರ ಸೇವಾ ವಿಷಯ.

**ಆ) ಆರ್ಥಿಕ ಅಧಿಕಾರಗಳು :**

ಸರ್ಕಾರದ ಆದೇಶ ಸಂಖ್ಯೆ : FD 7 DFP 91, ದಿನಾಂಕ : 16–09–1991 DPAR (BPE) 51 MEA 96, ದಿನಾಂಕ : 21–06–1996 ಮತ್ತು FD 1 TFP 91, ದಿನಾಂಕ : 02–02–2001 ರಂತೆ ವಿಭಾಗೀಯ ಮಟ್ಟದ ಅಧಿಕಾರಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರ ಮತ್ತು ಸರ್ಕಾರದ ಆದೇಶ ಸಂಖ್ಯೆ : FD 2 TFP 2010, ದಿನಾಂಕ : 30–04–2010 ರಂತೆ ಪ್ರತ್ಯಾಯೋಜಿಸಿರುವ ಸಾಮಾನ್ಯ ಆರ್ಥಿಕ ಅಧಿಕಾರ ಮತ್ತು ವಿಶೇಷ ಅಧಿಕಾರಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 248**

**SC-100**

**ಎನ್.ಪಿ. ರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಾಪನ).

## ಕಾರ್ಮಿಕ ಸಚಿವಾಲಯ

**ವಿಷಯ :** ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ಗ್ರೂಪ್ ಬಿ–ವೃಂದದ ಅಧಿಕಾರಿಗಳಿಗೆ ಬಾಡಿಗೆ ಆಧಾರದ ಮೇಲೆ ವಾಹನ ಪಡೆಯಲು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ ರವರ ಪ್ರಸ್ತಾವನೆ ಸಂ. ಇಎಸ್‌ಟಿ–01/ಇತರೆ ಸಿಆರ್–128/2012–13/667, ದಿನಾಂಕ : 12–09–2014.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 12–09–2014ರ ಪತ್ರದಲ್ಲಿ ನಿರ್ದೇಶಕರು ಕಾರ್ಖಾನೆಗಳು, ಬಾಯ್ಲರುಗಳು ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯವರು ವರದಿಮಾಡಿ ಈ ಇಲಾಖೆಯ ಗ್ರೂಪ್–ಬಿ ಮಟ್ಟದ ಅಧಿಕಾರಿಗಳೂ ಸಹಾ ಕ್ಷೇತ್ರಾಧಿಕಾರಿಗಳಾಗಿದ್ದು, ಅವರು ತಮ್ಮ ದೈನಂದಿನ ಸರ್ಕಾರಿ ಕೆಲಸಗಳಿಗೆ ನಿಗಧಿತ ಕ್ಷೇತ್ರ ವ್ಯಾಪ್ತಿಗೆ, ನ್ಯಾಯಾಲಯದ ಕೆಲಸಗಳಿಗೆ ಸರ್ಕಾರದ ವಿವಿಧ ಇಲಾಖೆಗಳ ಸಭೆಗಳಿಗೆ, ಅಪಘಾತ/ದೂರು ತನಿಖೆ ಇತ್ಯಾದಿ ಕೆಲಸಗಳಿಗೆ ಪ್ರಸ್ತುತ ಸಾರ್ವಜನಿಕ ಸಾರಿಗೆಯನ್ನೇ ಅವಲಂಭಿಸಿದ್ದು, ಇಂದಿನ ಜನದಟ್ಟಣೆಯ ಸಮಸ್ಯೆಯಿಂದಾಗಿ ನಿಗಧಿತ ಸಮಯಕ್ಕೆ ತಲುಸಲು ಸಾಧ್ಯವಾಗದೇ ನ್ಯಾಯಾಲಯ, ಆಡಳಿತ ವರ್ಗ ಹಾಗೂ ಸಾರ್ವಜನಿಕರ ಎದುರು ಮುಜುಗರ ಪಡುವ ಸಂದರ್ಭ ಉದ್ಭವಿಸುತ್ತಿದೆ. ಅಲ್ಲದೇ ಕೆಲವು ವೇಳೆ ಕ್ಷೇತ್ರ ವ್ಯಾಪ್ತಿಯಿಂದ ಕಛೇರಿಗೆ ಹಿಂದಿರುಗಲು ಸಾಧ್ಯವೇ ಆಗುವುದಿಲ್ಲ. ಇದರಿಂದ ಸಾರ್ವಜನಿಕರ ಹಾಗೂ ಕಛೇರಿ ಕೆಲಸಗಳು ಕುಂಠಿತವಾಗುತ್ತದೆ. ಆದ್ದರಿಂದ ಇಲಾಖೆಯ ಗ್ರೂಪ್–ಬಿ ದರ್ಜೆಯ ಕ್ಷೇತ್ರಾಧಿಕಾರಿಗಳಿಗೂ ಸಹ ವಾಹನ ಸೌಲಭ್ಯ ಒದಗಿಸುವುದು ಇಂದಿನ ಕಾಲಮಾನದಲ್ಲಿ ಅಗತ್ಯವಾಗಿರುತ್ತದೆ. ಪ್ರಸ್ತುತ ಇಲಾಖೆಯಲ್ಲಿ ಗ್ರೂಪ್–ಬಿ ದರ್ಜೆಯ 25 ಕ್ಷೇತ್ರಾಧಿಕಾರಿಗಳ ಹುದ್ದೆಗಳು ಮಂಜೂರಾಗಿರುತ್ತವೆ. ಅದರಲ್ಲಿ ಕೇವಲ 15 ಮಂದಿ ಮಾತ್ರ ಕಾರ್ಯನಿರತರಾಗಿರುತ್ತಾರೆ. ಉಳಿದ ಹುದ್ದೆಗಳು ಹೊಸದಾಗಿ ಮಂಜೂರಾಗಿದ್ದು ಕಛೇರಿಗಳನ್ನು ಸ್ಥಾಪಿಸಬೇಕಾಗಿರುತ್ತದೆ. ಇದರಿಂದ 2014–15ನೇ ಸಾಲಿನ ಪೂರಕ ಅಂದಾಜು–IIರ ಸಂದರ್ಭದಲ್ಲಿ ಈ ಇಲಾಖೆಯ ಗ್ರೂಪ್–ಬಿ ಮಟ್ಟದ ಅಧಿಕಾರಿಗಳಿಗೂ ಸಹ ವಾಹನ ಸೌಲಭ್ಯ ಒದಗಿಸಲು ಮಂಜೂರಾತಿ ನೀಡಿ 2014–15ನೇ ಸಾಲಿನ ಉಳಿದ ಅವಧಿಗೆ ರೂ. 22.50 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಾಇ 16 ಕಾಬಾಸೇ 2013, ಬೆಂಗಳೂರು, ದಿನಾಂಕ : 07–02–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕಾರ್ಖಾನೆಗಳು, ಬಾಯ್ಲರುಗಳು ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ಗ್ರೂಪ್–ಬಿ ಮಟ್ಟದ ಅಧಿಕಾರಿಗಳೂ ಸಹ ಕ್ಷೇತ್ರಾಧಿಕಾರಿಗಳಾಗಿದ್ದು, ಅವರು ತಮ್ಮ ದೈನಂದಿನ ಕೆಲಸಗಳಿಗೆ ನಿಗಧಿತ ಕ್ಷೇತ್ರ ವ್ಯಾಪ್ತಿಗೆ, ನ್ಯಾಯಾಲಯದ ಕೆಲಸಗಳಿಗೆ ಸರ್ಕಾರದ ವಿವಿಧ ಇಲಾಖೆಗಳ ಸಭೆಗಳಿಗೆ ಅಪಘಾತ/ದೂರು ತನಿಖೆ ಇತ್ಯಾದಿ ಕೆಲಸಗಳಿಗೆ ತೊಡಗಿಕೊಳ್ಳಲು ಅನುವಾಗುವ ಸಲುವಾಗಿ ಹಾಗೂ ಕ್ಷೇತ್ರಾಧಿಕಾರಿಗಳ ಕಾರ್ಯ ಚಟುವಟಿಕೆಗಳು ನಿರಂತರ ಚಲನವಲನ ಪ್ರಕ್ರಿಯೆಯಿಂದ ಕೂಡಿರುವುದರಿಂದ ಕಾರ್ಖಾನೆಗಳು, ಬಾಯ್ಲರುಗಳು ಕೈಗಾರಿಕಾ ಸುರಕ್ಷತೆ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ಗ್ರೂಪ್–ಬಿ ಮಟ್ಟದ ಅಧಿಕಾರಿಗಳಿಗೆ ಬಾಡಿಗೆ ಆಧಾರದ ಮೇಲೆ ವಾಹನ ಪಡೆಯುವ ಸಂಬಂಧ ಲೆಕ್ಕ ಶೀರ್ಷಿಕೆ 2230–01–102–0–01–195ರ ಯೋಜನೆಯಡಿಯಲ್ಲಿ ರೂ. 22.50 ಲಕ್ಷಗಳ (ಇಪ್ಪತ್ತೆರಡು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಹೆಚ್ಚುವರಿ ಅನುದಾನವನ್ನು 2014–15ರ ಪೂರಕ ಅಂದಾಜು–IIರಡಿ ಭರಿಸಲು ಮಂಜೂರಾತಿ ನೀಡಿ ಆದೇಶಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿ ಟಿಪ್ಪಣಿ ಸಂಖ್ಯೆ : ಆಇ 702 ವೆ–9/2014, ದಿನಾಂಕ : 22–01–2015ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ವಾಹನ ಭತ್ಯೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯವರು ನಿಗಧಿ ಪಡಿಸಿದ ಮಾರ್ಗಸೂಚನೆಗಳನ್ವಯ ಬಾಡಿಗೆ ಆಧಾರದ ಮೇಲೆ ವಾಹನಗಳನ್ನು ಪಡೆಯಲು ಸರ್ಕಾರ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬೋರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ

(ಕಾರ್ಖಾನೆಗಳು ಮತ್ತು ಬಾಯ್ಲರುಗಳು).

**P.R. 249**

**SC-50**

## COMMERCE AND INDUSTRIES SECRETARIAT

**SUB :** Constitution of Regional Micro & Small Enterprises Facilitation Councils to assist SMEs for recovery of delayed payment from the buyers.

**READ:**

1. New Industrial Policy of GoK 2014-19
2. MSMED Act-2006, dated 16.06.2006
3. GoK Notification No. CI 377 CSC 2006, dated 07.03.2007
4. Letter No. MSME/E02/MSEFC/RC/2014-15, dated 21.11.2014 of Commissioner for Industrial Development and Director of Industries & Commerce Department, GoK.

**PREAMBLE :**

Micro and Small Enterprises Facilitation Council (MSEFC), Karnataka was constituted by the State Government under the provisions of Sec.30 read with sub section 3 of Sec.21 and Sec.20 & 21(1) of MSMED Act, 2006. The Council is functioning as a quasi-

judicial authority as per MSMED Act 2006, Chapter-V, Section 15 to 25, for alternate dispute resolution relating to delayed payments to Micro and Small Enterprises

In the New Industrial Policy 2014-19 at Para No. 5.6.4.7, it has been announced that "Regional Micro & Small Enterprises Facilitation Councils will be constituted in Mysore, Belgaum & Gulbarga under the Chairmanship of concerned Regional Commissioners within the jurisdiction of their revenue division. However the facilitation council for Bangalore Region will continue to function under the Chairmanship of Commissioner for Industrial Development and Director of Industries & Commerce. An online system will be developed to receive and track the grievances regarding delayed payments to Micro & Small Enterprises".

In the letter read at ref (4), the Commissioner for Industrial Development has proposed to constitute three Regional Facilitation Councils at Mysuru, Belagavi and Kalaburagi under the Chairmanship of the Regional Commissioner of that Revenue Division as per the declaration made in the New Industrial Policy 2014-19. After the careful consideration of the proposal and the prevailing clauses of MSMED Act and Rules, the Government Orders as below.

**GOVERNMENT ORDER NO. CI 235 CSC 2014, BENGALURU, DATED 09.03.2015.**

As explained in the preamble of this order, the Government accords approval to constitute three Regional Micro and Small Enterprises Facilitation Councils at Mysuru, Belagavi and Kalaburagi under the Chairmanship of the concerned Regional Commissioners of Revenue Division and sanctions the powers conferred to the Chairpersons of Micro and Small Enterprises Facilitation Council under MSMED Act-2006 to the regional commissioners of the concerned division.

**P.R. 250**

**SC-500**

By Order and in the name of the Governor of Karnataka,

**L.S. SRIKANTABABU**

Under Secretary to Government (SSI)

Commerce & Industries Department.

## ಇಂಧನ ಸಚಿವಾಲಯ

**ವಿಷಯ :** ಶ್ರೀ ಕೆ. ಚಂದ್ರಶೇಖರ ರೆಡ್ಡಿ, ವಿದ್ಯುತ್ ಪರಿವೀಕ್ಷಕರು, ವಿದ್ಯುತ್ ಪರಿವೀಕ್ಷಣಾ ಇಲಾಖೆ, ಬಳ್ಳಾರಿ ಇವರನ್ನು ಪುನಃ ಸೇವೆಗೆ ತೆಗೆದುಕೊಳ್ಳುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಇಎನ್ 52 ಇಬಿಎಸ್ 2008, ದಿನಾಂಕ : 15–07–2006.
2. ಆದೇಶ ಸಂಖ್ಯೆ : ಇಎನ್ 52 ಇಬಿಎಸ್ 2006, ದಿನಾಂಕ : 09–10–2006.
3. ಆದೇಶ ಸಂಖ್ಯೆ : ಇಎನ್ 52 ಇಬಿಎಸ್ 2006, ದಿನಾಂಕ : 30–10–2006.
4. ಬಳ್ಳಾರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಆದೇಶ ದಿನಾಂಕ : 27–02–2013.
5. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ (ಜಿ) ಸಿಟಿಎಲ್–28/ಸಿಆರ್–6/2006, ದಿನಾಂಕ : 17–04–2013.
6. ಸರ್ಕಾರಿ ಆದೇಶ ಸಂಖ್ಯೆ : ಇಎನ್ 43 ಇಬಿಎಸ್ 2009, ದಿನಾಂಕ : 26–10–2013.
7. ಕ್ರಿಮಿನಲ್ ಅಪೀಲು ಸಂಖ್ಯೆ : 2573/2013ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯದ ದಿನಾಂಕ : 16–09–2014ರ ಆದೇಶ.
8. ಅರ್ಜಿ ಸಂಖ್ಯೆ : 7250/2013ರಲ್ಲಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ದಿನಾಂಕ : 13–01–2015ರ ತೀರ್ಪು.

1. ಶ್ರೀ ಕೆ. ಚಂದ್ರಶೇಖರ ರೆಡ್ಡಿ, (ಕೆ.ಸಿ. ರೆಡ್ಡಿ) ವಿದ್ಯುತ್ ಪರಿವೀಕ್ಷಕರು, ಬಳ್ಳಾರಿ, ಇವರು ಬಳ್ಳಾರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಟ್ರಾನ್ಸ್‌ಮಿಷನ್ ಸೆಂಟರ್‌ಗಳನ್ನು ತಪಾಸಣೆ ಮಾಡಿ ಪರವಾನಗಿಯ ಪತ್ರ ನೀಡಲು ಅಕ್ರಮ ಹಣವನ್ನು ಕೇಳಿದರು ಎಂಬ ದೂರಿನ ಮೇಲೆ ದಿನಾಂಕ : 19–06–2006 ರಂದು ಆರೋಪಿತರ ಕಛೇರಿಯಲ್ಲಿ ಲೋಕಾಯುಕ್ತ ಪೋಲೀಸರು ಬೀಸಿದ ಬಲೆಯಲ್ಲಿ ರೂ. 10,000/– ಲಂಚ ಪಡೆಯುವಾಗ ಸಿಕ್ಕಿಬಿದ್ದಿರುತ್ತಾರೆ. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 10(1)(ಎ)ರ ಮೇರೆಗೆ ತನಿಖೆಯನ್ನು ಬಾಕಿ ಇಟ್ಟು ಮೇಲೆ ಓದಲಾದ ಸಂಖ್ಯೆ (1)ರ ಆದೇಶದಲ್ಲಿ ಶ್ರೀ ಕೆ.ಸಿ. ರೆಡ್ಡಿ ಇವರನ್ನು ಅಮಾನತ್ತಿನಲ್ಲಿಡಲಾಗಿತ್ತು. ನಂತರ ಮೇಲೆ ಓದಲಾದ ಸರ್ಕಾರಿ ಆದೇಶ ಸಂಖ್ಯೆ (2)ರಲ್ಲಿ ಸದರಿಯವರ ಅಮಾನತ್ತನ್ನು ತೆರವುಗೊಳಿಸಿ ಅವರ ವಿರುದ್ಧ ಹೂಡಲಾಗಿರುವ ಪ್ರಕರಣ ಸಂಖ್ಯೆ : 6/2006 ಹಾಗೂ ಸಕ್ರಮ ನ್ಯಾಯಾಲಯದಲ್ಲಿ ಹೂಡಬಹುದಾದ ಪ್ರಕರಣಗಳಲ್ಲಿ ಆಗುವ ಅಂತಿಮ ತೀರ್ಮಾನವನ್ನು ಬಾಕಿ ಇಟ್ಟು ಧಾರವಾಡದಲ್ಲಿ ಖಾಲಿ ಇದ್ದ ವಿದ್ಯುತ್ ಪರಿವೀಕ್ಷಕರ ಹುದ್ದೆಗೆ ನೇಮಕ ಮಾಡಲಾಗಿತ್ತು. ನಂತರ ಲೋಕಾಯುಕ್ತ ಪೊಲೀಸರ ಕೋರಿಕೆಯಂತೆ ಸದರಿಯವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ, 7, 13(1)(ಡಿ) ಸಹವಾಚನ 13(2)ರ ಮೇರೆಗೆ ಸದರಿಯವರು ಎಸಗಿರುವ ಶಿಕ್ಷಾರ್ಹ ಅಪರಾಧ ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)ರನ್ವಯ ಅಭಿಯೋಜನೆಗೊಳಿಸಲು ಮೇಲೆ ಓದಲಾದ ಸಂಖ್ಯೆ (3)ರಲ್ಲಿನ ಸರ್ಕಾರಿ ಆದೇಶದಲ್ಲಿ ಮಂಜೂರಾತಿ ನೀಡಲಾಯಿತು.

2. ಶ್ರೀ ಚಂದ್ರಶೇಖರ ರೆಡ್ಡಿ ಅವರ ವಿರುದ್ಧ ಬಳ್ಳಾರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಅವರ ಅಭಿಯೋಜನೆ ಬಗ್ಗೆ ನಡೆಯುತ್ತಿದ್ದ ವಿಚಾರಣೆಯಲ್ಲಿ ಮಾನ್ಯ ನ್ಯಾಯಾಲಯವು ದಿನಾಂಕ : 27–02–2013 ರ ಆದೇಶದಲ್ಲಿ ಸದರಿಯವರಿಗೆ ಕಠಿಣ ಸಜೆ ಶಿಕ್ಷೆಯನ್ನು ವಿಧಿಸಿದೆ. ಬಳ್ಳಾರಿ ಸೆಷನ್ಸ್ ನ್ಯಾಯಾಲಯವು ಶ್ರೀ ಕೆ.ಸಿ. ರೆಡ್ಡಿ ಅವರ ವಿರುದ್ಧ ಲಂಚ ನಿರೋಧಕ ಕಾಯ್ದೆ 1988ರ ಕಲಂ–7 ಜೊತೆಗೆ 13(2)ರ ಅಡಿಯಲ್ಲಿ ಆರೋಪಗಳು ಸಾಬೀತಾಗಿದ್ದು ಸದರಿ ಆರೋಪಿತರಿಗೆ 1 ವರ್ಷ ಕಠಿಣ ಸಜೆ ಮತ್ತು ರೂ. 5000/–ದಂಡ ಹಾಗೂ ದಂಡ ಕಟ್ಟಲು ತಪ್ಪಿದಲ್ಲಿ 2 ತಿಂಗಳು ಸಾದಾ ಸಜೆ ಹಾಗೂ ಕಲಂ 13(1)(ಡಿ)

ಜೊತೆಗೆ 13(2)ರಡಿಯಲ್ಲಿ ಆರೋಪಗಳು ಸಾಬೀತಾಗಿದ್ದಕ್ಕೆ ಸದರಿ ಆರೋಪಿಗೆ 2 ವರ್ಷ ಕಠಿಣ ಸಜೆ ಅನುಭವಿಸುವಂತೆ ಮತ್ತು ರೂ. 10,000/– ದಂಡ ಕಟ್ಟುವಂತೆ, ದಂಡ ಕಟ್ಟಲು ತಪ್ಪಿದಲ್ಲಿ 4 ತಿಂಗಳ ಸಾದಾ ಸಜೆ ಅನುಭವಿಸುವಂತೆ ಶಿಕ್ಷೆ ವಿಧಿಸಿದೆ. ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಆದೇಶದ ಹಿನ್ನೆಲೆಯಲ್ಲಿ, ಭಾರತೀಯ ಸಂವಿಧಾನದ ಅನುಚ್ಛೇದ 311(2)ರ ಪ್ರವರ್ಗ, ಕೆ.ಸಿ.ಎಸ್. (ಸಿ.ಸಿ.ಎ) ನಿಯಮಾವಳಿಗಳು 1957ರ ನಿಯಮ 14 ಹಾಗೂ 10(2) ಮತ್ತು ಸರ್ವೋಚ್ಛ ನ್ಯಾಯಾಲಯವು ಕ್ರಿಮಿನಲ್ ಮೇಲ್ಮನವಿ ನಂ. 770/2001 ರಲ್ಲಿ ನೀಡಿರುವ ತೀರ್ಪಿನತ್ತ ಸೆಳೆಯುತ್ತ ಶ್ರೀ ಕೆ.ಸಿ. ರೆಡ್ಡಿ ಅವರನ್ನು ಸೇವೆಯಿಂದ ವಜಾಗೊಳಿಸಲು ಶೀಘ್ರದಲ್ಲೇ ಕ್ರಮ ಕೈಗೊಳ್ಳಬೇಕಾಗಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರು ಸರ್ಕಾರವನ್ನು ಕೋರಿದರು.

3. ಆರೋಪಿ ಅಧಿಕಾರಿಯಾದ ಶ್ರೀ ಕೆ. ಚಂದ್ರಶೇಖರ್ ರೆಡ್ಡಿ ಇವರಿಗೆ ಬಳ್ಳಾರಿ ಸೆಷನ್ಸ್ ನ್ಯಾಯಾಲಯವು ವಿಧಿಸಿದ ಶಿಕ್ಷೆಯ ಹಿನ್ನೆಲೆಯಲ್ಲಿ ತೀವ್ರ ಆರೋಪಕ್ಕಾಗಿ ದೋಷ ಸಿದ್ಧಿಯಾಗಿ ದಂಡನೆಗೆ ಗುರಿಯಾದ ಈ ಆರೋಪಿ ಅಧಿಕಾರಿಯು ಸೇವೆಯಲ್ಲಿ ಮುಂದುವರೆಯುವುದು ಸೂಕ್ತವಲ್ಲವೆಂದು ಕಂಡು ಬಂದ ಕಾರಣ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 8 (vii) ರ ಪ್ರಕಾರ ಶ್ರೀ ಕೆ. ಚಂದ್ರಶೇಖರ್ ರೆಡ್ಡಿ, ವಿದ್ಯುತ್ ಪರಿವೀಕ್ಷಕರು, ಬಳ್ಳಾರಿ ಇವರ ಮೇಲೆ ತಕ್ಷಣದಿಂದ ಜಾರಿಗೆ ಬರುವಂತೆ "ಸೇವೆಯಿಂದ ತೆಗೆದುಹಾಕುವ" ದಂಡನೆಯನ್ನು ವಿಧಿಸಿ, ಮೇಲೆ ಕ್ರಮ ಸಂಖ್ಯೆ : 6 ರಲ್ಲಿ ಓದಲಾದ ಆದೇಶವನ್ನು ಹೊರಡಿಸಲಾಯಿತು.

4. ಶ್ರೀ ಕೆ. ಚಂದ್ರಶೇಖರ್ ರೆಡ್ಡಿ ಇವರು ಸರ್ಕಾರದ ಮೇಲ್ಕಂಡ ಆದೇಶವನ್ನು ಪ್ರಶ್ನಿಸಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ : 7250/2013 ಸಲ್ಲಿಸಿದ್ದರು. ಮುಂದುವರೆದು, ತಮಗೆ ದಂಡನೆಯನ್ನು ವಿಧಿಸಿದ ಬಳ್ಳಾರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ದಿನಾಂಕ : 27–02–2013ರ ಆದೇಶವನ್ನು ಪ್ರಶ್ನಿಸಿ ಅರ್ಜಿದಾರರಾದ ಶ್ರೀ ಕೆ. ಚಂದ್ರಶೇಖರ್ ರೆಡ್ಡಿ ರವರು ಮಾನ್ಯ ಉಚ್ಚ ನ್ಯಾಯಾಲಯದ ಧಾರವಾಡ ಪೀಠದಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ : 2573/2013 ಸಲ್ಲಿಸಿದ್ದರು.

5. ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಕ್ರಿಮಿನಲ್ ಅಪೀಲು ಸಂಖ್ಯೆ : 2573/2013 ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯದ, ಧಾರವಾಡ ಪೀಠ ದಿನಾಂಕ : 16–09–2014ರ ಆದೇಶದಲ್ಲಿ ಮೇಲ್ಮನವಿಯನ್ನು ಪುರಸ್ಕರಿಸಿ ಕೆಳ ನ್ಯಾಯಾಲಯದ ತೀರ್ಪನ್ನು ತಳ್ಳಿಹಾಕಲಾಗಿರುತ್ತದೆ ಹಾಗೂ ಪ್ರಸ್ತಾಪಿತ ಅಧಿಕಾರಿಗೆ ಅಭಿಯೋಜನೆಗೊಳಿಸಲು ಮಂಜೂರಾತಿ ನೀಡಿ ಪೀಠಾಧಿಕಾರಿ ಹೊರಡಿಸಿರುವ ಆದೇಶವನ್ನು ಸಹ ತಳ್ಳಿಹಾಕಲಾಗಿರುತ್ತದೆ. ಮಾನ್ಯ ಉಚ್ಛ ನ್ಯಾಯಾಲಯದ ಸದರಿ ತೀರ್ಪಿನ ಹಿನ್ನೆಲೆಯಲ್ಲಿ, ತಮ್ಮನ್ನು ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಿದ ಸರ್ಕಾರದ ದಿನಾಂಕ : 26–10–2013ರ ಆದೇಶವನ್ನು ರದ್ದುಪಡಿಸಲು ಕೋರಿ ಅರ್ಜಿದಾರರಾದ ಶ್ರೀ ಕೆ. ಚಂದ್ರಶೇಖರ್ ರೆಡ್ಡಿ ರವರು ಕೆ.ಎ.ಟಿ. ಗೆ ಮನವಿ ಸಲ್ಲಿಸಲಾಗಿ, ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಮೆಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ ತೀರ್ಪಿನಲ್ಲಿ, ಪ್ರಸ್ತಾಪಿತ ಅಧಿಕಾರಿಯನ್ನು ಸೇವೆಯಿಂದ ತೆಗೆದುಹಾಕಲಾದ ದಿನಾಂಕ : 28–10–2013ರ ಆದೇಶವನ್ನು ರದ್ದುಪಡಿಸಿರುತ್ತದೆ ಮತ್ತು ತಕ್ಷಣವೇ ಅರ್ಜಿದಾರರನ್ನು ಸೇವೆಗೆ ತೆಗೆದುಕೊಳ್ಳಲು ನಿರ್ದೇಶನ ನೀಡಿರುತ್ತದೆ.

6. ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿ ತೀರ್ಪಿನ ಹಿನ್ನೆಲೆಯಲ್ಲಿ ಶ್ರೀ ಕೆ. ಚಂದ್ರಶೇಖರ್ ರೆಡ್ಡಿ ಇವರನ್ನು ಪುನಃ ಸೇವೆಗೆ ತೆಗೆದುಕೊಳ್ಳುವುದು ಅನಿವಾರ್ಯವಾಗಿರುತ್ತದೆ. ಶ್ರೀ ಕೆ. ಚಂದ್ರಶೇಖರ್ ರೆಡ್ಡಿ ಇವರನ್ನು ಸೇವೆಯಿಂದ ತೆಗೆದುಹಾಕಿದ ನಂತರ ಆ ಹುದ್ದೆಯನ್ನು ಸಹ ಪರಿಗಣಿಸಿ ದಿನಾಂಕ : 29–01–2014 ರಂದು 3 ಉಪ ವಿದ್ಯುತ್ ಪರಿವೀಕ್ಷಕರಿಗೆ ವಿದ್ಯುತ್ ಪರಿವೀಕ್ಷಕರ ಹುದ್ದೆಗೆ ಮುಂಬಡ್ತಿ ನೀಡಲಾಗಿದೆ. ಆದಕಾರಣ, ವಿದ್ಯುತ್ ಪರಿವೀಕ್ಷಕರ ಹುದ್ದೆಯಲ್ಲಿ ಪ್ರಸ್ತುತ ಯಾವುದೇ ರಿಕ್ತಸ್ಥಾನಗಳಿರುವುದಿಲ್ಲ. ಆದುದರಿಂದ ಈ ಹುದ್ದೆಯಲ್ಲಿನ ಪಟ್ಟಿಯಲ್ಲಿ ಕೊನೆಯವರಾದ ಶ್ರೀ ಮಲ್ಲಪ್ಪ ಎಸ್. ಕುರಿ, ವಿದ್ಯುತ್ ಪರಿವೀಕ್ಷಕರು, ಬಳ್ಳಾರಿ ಇವರನ್ನು ತಾತ್ಕಾಲಿಕವಾಗಿ ಅಂದರೆ ವಿದ್ಯುತ್ ಪರಿವೀಕ್ಷಕರ ಹುದ್ದೆಯಲ್ಲಿ ರಿಕ್ತಸ್ಥಾನವಾಗಿ ಲಭ್ಯವಾಗುವವರೆಗೆ ಉಪ ವಿದ್ಯುತ್ ಪರಿವೀಕ್ಷಕರ ಹುದ್ದೆಗೆ ಹಿಂಬಡ್ತಿ ನೀಡಿ ಆ ಸ್ಥಳಕ್ಕೆ ಶ್ರೀ ಕೆ. ಚಂದ್ರಶೇಖರ್ ರೆಡ್ಡಿ ರವರನ್ನು ನೇಮಿಸಲು ನಿರ್ಣಯಿಸಲಾಗಿದೆ.

7. ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಮುಂದಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 244 ಇಬಿಎಸ್ 2014, ಬೆಂಗಳೂರು, ದಿನಾಂಕ : 25–03–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಮಲ್ಲಪ್ಪ ಎಸ್. ಕುರಿ, ವಿದ್ಯುತ್ ಪರಿವೀಕ್ಷಕರು, ಬಳ್ಳಾರಿ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ವಿದ್ಯುತ್ ಪರಿವೀಕ್ಷಕರ ವೃಂದದಲ್ಲಿ ರಿಕ್ತ ಸ್ಥಾನಗಳು ಲಭ್ಯವಾಗುವವರೆಗೆ ತಾತ್ಕಾಲಿಕವಾಗಿ ಉಪ ವಿದ್ಯುತ್ ಪರಿವೀಕ್ಷಕರು ಹುದ್ದೆಗೆ ಹಿಂಬಡ್ತಿ ನೀಡಿ ಉಪ ವಿದ್ಯುತ್ ಪರಿವೀಕ್ಷಕರು, ಬೆಳಗಾವಿ ಇಲ್ಲಿನ ಖಾಲಿ ಹುದ್ದೆಗೆ ನೇಮಿಸಲಾಗಿದೆ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 8(vii) ರನ್ವಯ ಸೇವೆಯಿಂದ ತೆಗೆದುಹಾಕಲಾಗಿದ್ದ ಶ್ರೀ ಕೆ. ಚಂದ್ರಶೇಖರ್ ರೆಡ್ಡಿ, ವಿದ್ಯುತ್ ಪರಿವೀಕ್ಷಕರು, ಇವರನ್ನು ಅರ್ಜಿ ಸಂಖ್ಯೆ : 7250/2013ರಲ್ಲಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ದಿನಾಂಕ : 13–01–2015ರ ತೀರ್ಪಿನಲ್ಲಿ ನೀಡಲಾದ ನಿರ್ದೇಶನದಂತೆ ತಕ್ಷಣದಿಂದ ಜಾರಿಗೆ ಬರುವಂತೆ ಪುನಃ ಸೇವೆಗೆ ತೆಗೆದುಕೊಂಡು, ಶ್ರೀ ಮಲ್ಲಪ್ಪ ಎಸ್. ಕುರಿ, ವಿದ್ಯುತ್ ಪರಿವೀಕ್ಷಕರು, ಬಳ್ಳಾರಿ ಇವರ ಹಿಂಬಡ್ತಿಯಿಂದ ತೆರವಾಗಿರುವ ಹುದ್ದೆಗೆ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಶಿವಕುಮಾರ್**

ಪೀಠಾಧಿಕಾರಿ,

(ವಿದ್ಯುಚ್ಛಕ್ತಿ)

ಇಂಧನ ಇಲಾಖೆ.

**P.R. 251**

**SC-50**

## ಇಂಧನ ಸಚಿವಾಲಯ

**ವಿಷಯ :** ಶ್ರೀ ಎಲ್. ಮೇಘನಾಯ್ಕ್, ವಿದ್ಯುತ್ ಪರಿವೀಕ್ಷಕರು, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಲೋಕಾಯುಕ್ತ ಪ್ರಾಧಿಕಾರಕ್ಕೆ ವಹಿಸುವ ಬಗ್ಗೆ.

ಓದಲಾಗಿದೆ :
1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ (ಜಿ)/ಸಿಟಿ/ಕ್ರೈಂ.63/2010, ದಿನಾಂಕ : 05–02–2011 (ತನಿಖಾ ವರದಿ)
2. ಆದೇಶ ಸಂಖ್ಯೆ : ಇಎನ್ 160 ಇಬಿಎಸ್ 2010, ದಿನಾಂಕ : 19–02–2011.
3. ಅಧಿಸೂಚನೆ ಸಂಖ್ಯೆ : ಇಎನ್ 160 ಇಬಿಎಸ್ 2010, ದಿನಾಂಕ : 25–05–2011.
4. ಸರ್ಕಾರಿ ಆದೇಶ ಸಂಖ್ಯೆ : ಇಎನ್ 59 ಇಬಿಎಸ್ 2011, ದಿನಾಂಕ : 28–03–2013.
5. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ (ಜಿ)/ಸಿಟಿ/ಕ್ರೈಂ.63/2010, ದಿನಾಂಕ : 20–05–2013.
6. ಸರ್ಕಾರಿ ಆದೇಶ ಸಂಖ್ಯೆ : ಇಎನ್ 59 ಇಬಿಎಸ್ 2011, ದಿನಾಂಕ : 03–07–2014.
7. ಉಪ ನಿಬಂಧಕರು, ವಿಚಾರಣೆಗಳು–2, ಕರ್ನಾಟಕ ಲೋಕಾಯುಕ್ತ, ಇವರ ಪತ್ರ ಸಂಖ್ಯೆ : ಕಂಪ್ಲೇಂಟ್ ಉಪಲೋಕ್/ಬಿಸಿಡಿ/3323/2014/ಡಿಆರ್‌ಇ–2, ದಿನಾಂಕ : 12–01–2015.

**ಪ್ರಸ್ತಾವನೆ :**

1. ಶ್ರೀ ಎಲ್. ಮೇಘನಾಯ್ಕ್, ವಿದ್ಯುತ್ ಪರಿವೀಕ್ಷಕರು, ಇವರು ಉಪ ವಿದ್ಯುತ್ ಪರಿವೀಕ್ಷಕರಾಗಿ ಕೇಂದ್ರೀಯ ಉಪವಿಭಾಗ, ಬೆಂಗಳೂರು ಪೂರ್ವ ವಲಯ, ಉಪ ವಿದ್ಯುತ್ ಪರಿವೀಕ್ಷಕರ ಕಛೇರಿ, ಮಲ್ಲೇಶ್ವರಂನಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಮಯದಲ್ಲಿ ಶ್ರೀ ಸಿ.ವಿ. ಮಲ್ಲಿಕಾರ್ಜುನ, ಹೆಬ್ಬಾಳ, ಕೆಂಪಾಪುರ, ಬೆಂಗಳೂರು (ಫಿರ್ಯಾದುದಾರರು), ವಿದ್ಯುತ್ ಗುತ್ತಿಗೆದಾರರು, ಇವರು ಶ್ರೀಮತಿ ನಾಗರತ್ನಮ್ಮ ಎಂಬುವವರಿಗೆ ಸೇರಿದ ಕಟ್ಟಡದ ವಿದ್ಯುತ್ ಕಾಮಗಾರಿಯ ಪರಿವರ್ತಕದ ಅನುಮೋದನೆಯನ್ನು ನೀಡಲು ಫಿರ್ಯಾದುದಾರರಿಂದ ರೂ. 18,000/–ಗಳ ಲಂಚ ಸ್ವೀಕರಿಸುವಾಗ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಯಲ್ಲಿ ಸಿಕ್ಕಿಬಿದ್ದಿರುತ್ತಾರೆ. ಆ ಸಮಯದಲ್ಲಿ ಇವರ ಬಲಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿಸಿ ತೊಳೆಸಿದಾಗ ಬಣ್ಣ ರಹಿತ ದ್ರಾವಣವು ತಿಳಿ ಗುಲಾಬಿ ಬಣ್ಣಕ್ಕೆ ಹಾಗೂ ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿಸಿ ತೊಳೆಸಿದಾಗ ಬಣ್ಣ ರಹಿತ ದ್ರಾವಣವು ಗುಲಾಬಿ ಬಣ್ಣಕ್ಕೆ ಹಾಗೂ ಲಂಚದ ಹಣವಿಟ್ಟ ಟೇಬಲ್ ಡ್ರಾಯರ್ ಒಳ ಭಾಗವನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿಸಿ ತೊಳೆಸಿದಾಗ ತಿಳಿ ಗುಲಾಬಿ ಬಣ್ಣಕ್ಕೆ ತಿರುಗುವುದರ ಮೂಲಕ ಸಕಾರಾತ್ಮಕವಾಗಿ ಲಂಚದ ಹಣ ಸ್ವೀಕರಿಸಿದ್ದು, ದೃಢಪಡುತ್ತದೆ. ಮೇಲ್ನೋಟಕ್ಕೆ ಭ್ರಷ್ಟಾಚಾರದ ಆಪಾದನೆಯ ಸಾಬೀತುಗೊಂಡಿರುವುದಾಗಿ ಕಂಡುಬರುವುದರಿಂದ ಶ್ರೀ ಎಲ್. ಮೇಘನಾಯ್ಕ್ ಇವರನ್ನು ಲೋಕಾಯುಕ್ತ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರ ಶಿಫಾರಸ್ಸಿನಂತೆ ಅಧಿಕಾರಿಯವರ ವಿರುದ್ಧದ ವಿಚಾರಣೆಯನ್ನು ಬಾಕಿ ಇಟ್ಟು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಮಾನತ್ತಿನಲ್ಲಿಡಲಾಗಿತ್ತು.

2. ನಂತರ ಆರೋಪಿ ಅಧಿಕಾರಿಯವರ ಇವರ ವಿರುದ್ಧ ದಾಖಲಾಗಿರುವ ಪ್ರಕರಣದ ಸಂಖ್ಯೆ : 63/2010ರ ಅಂತಿಮ ವಿಚಾರಣೆಯನ್ನು ಬಾಕಿಯಿಟ್ಟು ಮೇಲೆ ಓದಲಾದ ಆದೇಶ ಸಂಖ್ಯೆ (3)ರಲ್ಲಿ ಇವರ ಅಮಾನತ್ತನ್ನು ತೆರವುಗೊಳಿಸಿದೆ. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಅವರು ಮೇಲೆ ಓದಲಾದ (1)ರ ಪತ್ರದಲ್ಲಿ ಸದರಿ ಆರೋಪಿತ ಅಧಿಕಾರಿಯವರ ವಿರುದ್ಧ ದಾಖಲಾಗಿರುವ ಲಂಚ ಪ್ರಕರಣದಲ್ಲಿ ಲಂಚ ನಿರೋಧಕ ಕಾಯ್ದೆ–1988ರ ಕಲಂ 7, 13(1)(ಡಿ) ಸಹವಾಚನ 13(2) ರಡಿಯಲ್ಲಿ ಅವರ ಮೇಲಿನ ಆರೋಪಗಳು ಸಾಬೀತಾಗಿರುವುದರಿಂದ, ಅವರನ್ನು ಕಾಯ್ದೆಯ ಕಲಂ 19(1)(ಬಿ) ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಸರ್ಕಾರದ ಮಂಜೂರಾತಿ ಆದೇಶವನ್ನು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಶ್ರೀ ಎಲ್. ಮೇಘನಾಯ್ಕ್, ಇವರ ಅಭಿಯೋಜನಾ ಮಂಜೂರಾತಿಯನ್ನು ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಆದೇಶದಲ್ಲಿ ನಿರಾಕರಿಸಲಾಗಿತ್ತು.

3. ಮುಂದುವರೆದು, ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿ ಮತ್ತೊಂದು ವರದಿಯನ್ನು ಕಳುಹಿಸಿ ತಮ್ಮ ಪತ್ರದಲ್ಲಿ ಕೆಲವು ಸ್ಪಷ್ಟೀಕರಣವನ್ನು ನೀಡಿ ಸರ್ಕಾರದ ಹಿಂದಿನ ನಿಲುವನ್ನು ಪುನರ್ ಪರಿಶೀಲಿಸಿ ಶ್ರೀ ಎಲ್. ಮೇಘನಾಯ್ಕ್ ಅವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಪೂರ್ವಾನುಮತಿ ನೀಡಬೇಕಾಗಿ ಕೋರಿದರು. ನಂತರ ಈ ಪ್ರಸ್ತಾವನೆಯನ್ನು ಮತ್ತಮ್ಮೆ ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಆರೋಪಿತ ಅಧಿಕಾರಿಯು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯವೆಂದು ಮನಗಂಡು, ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಆದೇಶವನ್ನು ಹಿಂಪಡೆದುಕೊಂಡು, ಆರೋಪಿತ ಅಧಿಕಾರಿ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸಲು ಭ್ರಷ್ಟಾಚಾರ ನಿಯಂತ್ರಣ ಕಾಯ್ದೆ 1988ರ ಕಲಂ 19(1) (ಬಿ) ರನ್ವಯ ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ಆದೇಶದಲ್ಲಿ ಮಂಜೂರಾತಿಯನ್ನು ನೀಡಿದೆ.

4. ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಪತ್ರದಲ್ಲಿ ಉಪ ನಿಬಂಧಕರು, ವಿಚಾರಣೆಗಳು–2, ಕರ್ನಾಟಕ ಲೋಕಾಯುಕ್ತ ಇವರು ಈ ಪ್ರಕರಣದಲ್ಲಿ ಮಾನ್ಯ ಉಪ ಲೋಕಾಯುಕ್ತರವರು ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(3)ರಡಿ ಸಲ್ಲಿಸಿರುವ ಮೂಲ ವರದಿಯನ್ನು ಸರ್ಕಾರಕ್ಕೆ ಮುಂದಿನ ಕ್ರಮ ಕೈಗೊಳ್ಳಲು ಕಳುಹಿಸಿರುತ್ತಾರೆ. ಮಾನ್ಯ ಉಪ ಲೋಕಾಯುಕ್ತರ ವರದಿಯಲ್ಲಿ ಶ್ರೀ ಎಲ್. ಮೇಘನಾಯ್ಕ್ ಇವರು ಶ್ರೀ ಸಿ.ವಿ. ಮಲ್ಲಿಕಾರ್ಜುನ, ವಿದ್ಯುತ್ ಗುತ್ತಿಗೆದಾರರು ಇವರಿಂದ ಲಂಚ ಸ್ವೀಕರಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಎಸಗಿರುವ ಭ್ರಷ್ಟಾಚಾರದ ಕುರಿತು ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 7(2)ರಡಿ ತನಿಖೆಯನ್ನು ನಡೆಸಲಾಗಿದ್ದು, ಪ್ರಕರಣದ ವಾಸ್ತವಾಂಶಗಳು ಮತ್ತು ದಾಖಲೆಗಳಿಂದ ಆರೋಪಿತರು ಸರ್ಕಾರಿ ಅಧಿಕಾರಿಯಾಗಿದ್ದು, ಸೇವೆಯಲ್ಲಿ ನಿಷ್ಠೆ ಮತ್ತು ಪ್ರಾಮಾಣಿಕತೆಯನ್ನು ಪಾಲಿಸಲು ವಿಫಲರಾಗಿರುವುದು ತಿಳಿದುಬರುತ್ತದೆ ಹಾಗೂ ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡಿದ್ದು, ತಮ್ಮ ವಿರುದ್ಧ ಶಿಸ್ತು ಕ್ರಮವನ್ನು ಜರುಗಿಸಲು ಎಡೆಮಾಡಿಕೊಟ್ಟಿರುತ್ತಾರೆ. ಅದರಂತೆ ತನಿಖೆಯನ್ನು ನಡೆಸಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಗೊಳ್ಳಲು ಸಕ್ಷಮ ಪ್ರಾಧಿಕಾರಕ್ಕೆ ಏಕೆ ಶಿಫಾರಸ್ಸು ಮಾಡಬಾರದು ಎಂಬ ಕುರಿತು ಆರೋಪಿತರಿಗೆ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಗಿರುತ್ತದೆ. ಅದಕ್ಕೆ ಆರೋಪಿತರು ಒದಗಿಸಿರುವ ಉತ್ತರವು ಸಮಾದಾನಕರವಾಗಿರುವುದಿಲ್ಲ. ಈ ಪ್ರಕರಣದಲ್ಲಿ ಆರೋಪಿತರು Karnataka Electricity Board Employees (conduct) Regulation 1988 ರ ನಿಯಮ 3(1)ರಡಿ ದುರ್ನಡತೆ ಎಸಗಿರುವುದು ದಾಖಲೆಗಳಿಂದ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಪ್ರಸ್ತಾಪಿತ ಅಧಿಕಾರಿಯ ವಿರುದ್ಧ ಕರ್ನಾಟಕ ಎಲೆಕ್ಟ್ರಿಕಲ್ ಬೋರ್ಡ್ ಎಂಪ್ಲಾಯೀಸ್ (Classification, Disipline, Control & Appeal) Regulation. 1987ರ ನಿಯಮ 14(ಎ) ರಡಿ ಇಲಾಖಾ ವಿಚಾರಣೆಯನ್ನು ಕೈಗೊಳ್ಳಲು ಕರ್ನಾಟಕ ಲೋಕಾಯುಕ್ತಕ್ಕೆ ವಹಿಸಲು ಲೋಕಾಯುಕ್ತ ಕಾಯ್ದೆ ಕಲಂ 12(3) ರಡಿ ಶಿಫಾರಸ್ಸು

ಮಾಡಿರುತ್ತಾರೆ. ಆಪಾದಿತ ಅಧಿಕಾರಿಯವರು ಬೋರ್ಡ್ ಎಂಪ್ಲಾಯಿ ಆಗಿರದೆ ಸರ್ಕಾರಿ ಅಧಿಕಾರಿಯಾಗಿರುವುದರಿಂದ ಉಪ ನಿಬಂಧಕರು. ವಿಚಾರಣೆಗಳು-2 ಇವರ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಈ ಸಂಬಂಧ ಪೂರ್ಣ ಪ್ರಮಾಣದ ವಿಚಾರಣೆಯನ್ನು ಕರ್ನಾಟಕ ಲೋಕಾಯುಕ್ತಕ್ಕೆ ವಹಿಸಿ, ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 284 ಇಬಿಎಸ್ 2014, ಬೆಂಗಳೂರು, ದಿನಾಂಕ : 18-03-2015.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಲ್. ಮೇಘನಾಯ್ಕ್, ವಿದ್ಯುತ್ ಪರಿವೀಕ್ಷಕರು, ವಿದ್ಯುತ್ ಪರಿವೀಕ್ಷಣಾ ಇಲಾಖೆ ಇವರ ವಿರುದ್ಧ ದಾಖಲಾಗಿರುವ ಪ್ರಕರಣಕ್ಕೆ ಸಂಬಂಧಿಸಿದಂತೆ ಶಿಸ್ತು ಕ್ರಮ ಜರುಗಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 14(ಎ) ಪ್ರಕಾರ ವಿಚಾರಣೆಯನ್ನು ನಡೆಸಲು ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಶಿವಕುಮಾರ್**

ಪೀಠಾಧಿಕಾರಿ,

(ವಿದ್ಯುಚ್ಛಕ್ತಿ)

ಇಂಧನ ಇಲಾಖೆ.

P.R. 252

## ಕಂದಾಯ ಸಚಿವಾಲಯ

**ವಿಷಯ :** 2014-15ನೇ ಸಾಲಿನಲ್ಲಿ ವಿವಿಧ ಧಾರ್ಮಿಕ ಸಂಸ್ಥೆಗಳಿಗೆ ಅನುದಾನ ಬಿಡುಗಡೆ ಮಾಡುವ ಕುರಿತು.

**ಪ್ರಸ್ತಾವನೆ:-**

2014-15ನೇ ಸಾಲಿನಲ್ಲಿ ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ ಮತ್ತು ತುವಕೂರು ಜಿಲ್ಲೆಗಳಲ್ಲಿನ 04 ಧಾರ್ಮಿಕ ಸಂಸ್ಥೆಗಳಿಗೆ ಒಟ್ಟು ₹.16.50 ಲಕ್ಷಗಳ ಅನುದಾನವನ್ನು ಇಲಾಖಾ ಲೆಕ್ಕ ಶೀರ್ಷಿಕೆ "2250-00-103-5-12-ದೇವಸ್ಥಾನಗಳು ಮತ್ತು ಇತರೇ ಧಾರ್ಮಿಕ ಸಂಸ್ಥೆಗಳು-101-ಸಹಾಯಾನುದಾನ (ಯೋಜನೇತರ)" ಅಡಿ ಒದಗಿಸಿರುವ ಅನುದಾನದಲ್ಲಿ ಮಂಜೂರು ಮಾಡಲು ಸರ್ಕಾರವು ತೀರ್ಮಾನಿಸಿದೆ.

ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 07 ಮುಅಬಿ 2015, ಬೆಂಗಳೂರು; ದಿನಾಂಕ: 17ನೇ ಜನವರಿ, 2015**

2014-15ನೇ ಸಾಲಿನಲ್ಲಿ ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ ಮತ್ತು ತುಮಕೂರು ಜಿಲ್ಲೆಗಳಲ್ಲಿನ 04 ಧಾರ್ಮಿಕ ಸಂಸ್ಥೆಗಳಿಗೆ ಸೇರಿದ ಅನುಬಂಧ-01 ರಿಂದ 04 ರವರೆಗೆ ಸೂಚಿಸಿರುವ ಧಾರ್ಮಿಕ ಸಂಸ್ಥೆಗಳಿಗೆ ಒಟ್ಟು ₹.16.50 ಲಕ್ಷ **(ಹದಿನಾರು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ)** ಮೊತ್ತದ ಅನುದಾನವನ್ನು ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಇಲಾಖೆ ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

**ಷರತ್ತುಗಳು**

1) ಉದ್ದೇಶಿತ ಕಾಮಗಾರಿಗಳ ಅಂದಾಜುಪಟ್ಟಿಗೆ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಮತ್ತು ಆಡಳಿತಾತ್ಮಕ ಅನುಮೋದನೆ ಪಡೆಯತಕ್ಕದ್ದು;
2) ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಇಲಾಖೆ ಇವರು ಹಂಚಿಕೆ ಮಾಡಿದ ಮೊತ್ತದಲ್ಲಿ ಜಿಲ್ಲಾಧಿಕಾರಿಗಳು ಸಂಬಂಧಪಟ್ಟ ಧಾರ್ಮಿಕ ಸಂಸ್ಥೆಯು ಕಾಮಗಾರಿಗಳಲ್ಲಿ ಉಂಟಾಗುವ ಪ್ರಗತಿ ಆಧರಿಸಿ ಅನುದಾನ ಬಿಡುಗಡೆ ಮಾಡತಕ್ಕದ್ದು;
3) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ವಿವಿಧ ಮುಜರಾಯಿ / ಮುಜರಾಯೇತರ ಸಂಸ್ಥೆಗಳಿಗೆ ಬಿಡುಗಡೆ ಮಾಡಲಾದ ಅನುದಾನಗಳನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಡಿಡಿಓ ಸಂಕೇತಕ್ಕೆ ಅಪ್‌ಲೋಡ್ ಮಾಡುವುದು;
4) ಸಂಬಂಧಿಸಿದ ಜಿಲ್ಲಾಧಿಕಾರಿಗಳು ಅಂತಹ ಸಂಸ್ಥೆಗಳಿಗೆ ನಿಯಮಾನುಸಾರ ನೀಡಬಹುದಾದ ಅನುದಾನದ ಮೊತ್ತವನ್ನು ಸಂಬಂಧಪಟ್ಟ ಸಂಸ್ಥೆಗಳಿಗೆ 'ಮುಂಗಡ ರಸೀತಿ' (Advance receipt) ಪಡೆದು ಸಾಧಿಲ್ವಾರು ಬಿಲ್ಲಿಗೆ ಲಗತ್ತಿಸಿ ಖಜಾನೆಯಿಂದ ಸಂಸ್ಥೆಯ ಹೆಸರಿಗೆ ಚೆಕ್ಕು ಪಡೆದು ಪಾವತಿಸುವುದು;
5) ವಿವಿಧ ಧಾರ್ಮಿಕ ಸಂಸ್ಥೆಗಳು ಅಭಿವೃದ್ಧಿ ಕಾಮಗಾರಿಗೆ ಬಿಡುಗಡೆ ಮಾಡಲಾದ ಮೊತ್ತದ ವಿವರಗಳನ್ನು ಒಳಗೊಂಡ ದಾಖಲೆ ವೀಕ್ಷಣಾ ಪುಸ್ತಕ (Watch Register) ನಿರ್ವಹಿಸಿ ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಇಲಾಖೆ ಇವರು ಪೂರ್ಣ ವಿವರ ಪಟ್ಟಿ ಮಾಡಿ ಪ್ರತಿ ತ್ರೈಮಾಸಿಕಕ್ಕೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು;
6) ಸರ್ಕಾರದ ಸುತ್ತೋಲೆ ಸಂಖ್ಯೆ:ಕಂಇ 95 ಮುಅಬಿ 2010 ದಿನಾಂಕ: 20-09-2010ರಲ್ಲಿ ನೀಡಲಾದ ಸೂಚನೆಗಳು ಇದಕ್ಕೂ ಸಹ ಅನ್ವಯವಾಗುತ್ತದೆ;
7) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ (1999)ರ ಅಡಿ ನಮೂದಿಸಿರುವ ಕಾರ್ಯವಿಧಾನ (Procedure) ಅನುಸರಿಸತಕ್ಕದ್ದು;

ಆ ಸಂಬಂಧದ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2250-00-103-5-12-ದೇವಸ್ಥಾನಗಳು ಮತ್ತು ಇತರೇ ಧಾರ್ಮಿಕ ಸಂಸ್ಥೆಗಳು-101-ಸಹಾಯಾನುದಾನ (ಯೋಜನೇತರ)" ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಆಇ 07 ಬಿಪಿಇ 2014 ದಿನಾಂಕ: 31–07–2014 ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ಜಯರಾಮೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

**ಸರ್ಕಾರದ ಆದೇಶ ಸಂಖ್ಯೆ: ಕಂಇ 07 ಮುಅಬಿ 2015, ಬೆಂಗಳೂರು; ದಿನಾಂಕ: 17ನೇ ಜನವರಿ, 2015**

**ಅನುಬಂಧ – 01**

**ಬಳ್ಳಾರಿ ಜಿಲ್ಲೆ**

| ಕ್ರ. ಸಂ | ಧಾರ್ಮಿಕ ಸಂಸ್ಥೆಯ ಹೆಸರು | ಬಿಡುಗಡೆ ಮಾಡಿರುವ ಅನುದಾನ (₹.ಲಕ್ಷಗಳಲ್ಲಿ) |
|---|---|---|
| 1. | ಶ್ರೀ ಸುಂಕಲಮ್ಮ ದೇವಸ್ಥಾನ, ಹಗರಿ, ಹಗರಿಸ್ಟೇಷನ್, ಬಳ್ಳಾರಿ ತಾಲ್ಲೂಕು | 5.00 |
| | **ಒಟ್ಟು** | **5.00** |

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

**ಸರ್ಕಾರದ ಆದೇಶ ಸಂಖ್ಯೆ: ಕಂಇ 07 ಮುಅಬಿ 2015, ಬೆಂಗಳೂರು; ದಿನಾಂಕ: 17ನೇ ಜನವರಿ, 2015**

**ಅನುಬಂಧ – 02**

**ಚಿತ್ರದುರ್ಗ ಜಿಲ್ಲೆ**

| ಕ್ರ. ಸಂ | ಧಾರ್ಮಿಕ ಸಂಸ್ಥೆಯ ಹೆಸರು | ಬಿಡುಗಡೆ ಮಾಡಿರುವ ಅನುದಾನ (₹.ಲಕ್ಷಗಳಲ್ಲಿ) |
|---|---|---|
| 1. | ಶ್ರೀ ವೀರಾಂಜನೇಯ ದೇವಸ್ಥಾನ, ಗುಂತಕೋಲಮ್ಮನಹಳ್ಳಿ, ನಾಯಕನಹಟ್ಟಿ ಹೋಬಳಿ, ಚಳ್ಳಕೆರೆ ತಾಲ್ಲೂಕು | 5.00 |
| | **ಒಟ್ಟು** | **5.00** |

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

**ಸರ್ಕಾರದ ಆದೇಶ ಸಂಖ್ಯೆ: ಕಂಇ 07 ಮುಅಬಿ 2015, ಬೆಂಗಳೂರು; ದಿನಾಂಕ: 17ನೇ ಜನವರಿ, 2015**

**ಅನುಬಂಧ – 03**

**ದಾವಣಗೆರೆ ಜಿಲ್ಲೆ**

| ಕ್ರ. ಸಂ | ಧಾರ್ಮಿಕ ಸಂಸ್ಥೆಯ ಹೆಸರು | ಬಿಡುಗಡೆ ಮಾಡಿರುವ ಅನುದಾನ (₹.ಲಕ್ಷಗಳಲ್ಲಿ) |
|---|---|---|
| 1. | ಶ್ರೀ ಚೌಡೇಶ್ವರಿ ದೇವಸ್ಥಾನ, ಕಂಚಿಗನಾಳ್, ಚನ್ನಗಿರಿ ತಾಲ್ಲೂಕು | 5.00 |
| | **ಒಟ್ಟು** | **5.00** |

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

**ಸರ್ಕಾರದ ಆದೇಶ ಸಂಖ್ಯೆ: ಕಂಇ 07 ಮುಅಬಿ 2015, ಬೆಂಗಳೂರು; ದಿನಾಂಕ: 17ನೇ ಜನವರಿ, 2015**

**ಅನುಬಂಧ – 04**

**ತುಮಕೂರು ಜಿಲ್ಲೆ**

| ಕ್ರ. ಸಂ | ಧಾರ್ಮಿಕ ಸಂಸ್ಥೆಯ ಹೆಸರು | ಬಿಡುಗಡೆ ಮಾಡಿರುವ ಅನುದಾನ (₹.ಲಕ್ಷಗಳಲ್ಲಿ) |
|---|---|---|
| 1. | ಶ್ರೀ ಮಾರಮ್ಮನ ದೇವಸ್ಥಾನ, ಪೇನೋಬನಹಳ್ಳಿ, ಪಾವಗಡ ತಾಲ್ಲೂಕು | 01.50 |
| | **ಒಟ್ಟು** | 01.50 |

PR-121

**ಸಿ.ಟಿ. ಜಯರಾಮೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

## ಸಹಕಾರ ಸಚಿವಾಲಯ
### ತಿದ್ದೋಲೆ

**ಸಂಖ್ಯೆ: ಸಿಒ 212 ಸಿಎಲ್ಎಸ್ 2013 (ಭಾ-3) ಬೆಂಗಳೂರು, ದಿನಾಂಕ: 09-03-2015.**

ಸರ್ಕಾರದ ಆದೇಶ ಸಂಖ್ಯೆ:ಸಿಒ 212 ಸಿಎಲ್ಎಸ್ 2013, ದಿನಾಂಕ: 10-10-2014 ರ ಅನುಬಂಧದ ಕ್ರಮ ಸಂಖ್ಯೆ: 62 ರಲ್ಲಿ ಜಿಲ್ಲಾ ಸಹಕಾರಿ ಯೂನಿಯನ್, ಚಾಮರಾಜನಗರ ಇದರ ಕಟ್ಟಡ ನಿರ್ಮಾಣಕ್ಕೆ ರೂ.20.00 ಲಕ್ಷ ಬಿಡುಗಡೆ ಮಾಡಿ ಆದೇಶಿಸಿದ್ದ ಅನುದಾನವನ್ನು ಹಿಂಪಡೆದು ಅದರ ಬದಲಾಗಿ ಈ ಕೆಳಕಂಡ ಎರಡು ಸಹಕಾರ ಸಂಸ್ಥೆಗಳಿಗೆ ಕಟ್ಟಡ ನಿರ್ಮಾಣಕ್ಕಾಗಿ ಹಂಚಿಕೆ ಮಾಡಲಾಗಿದೆ ಎಂದು ಓದಿಕೊಳ್ಳತಕ್ಕದ್ದು.

| | | | |
|---|---|---|---|
| **62** | **ಪಿಕೆಪಿಎಸ್, ಉಗರಗೋಳ, ತಾ: ಸವದತ್ತಿ, ಬೆಳಗಾವಿ** | **ಕಟ್ಟಡ ನಿರ್ಮಾಣ** | **₹.10.00 ಲಕ್ಷ** |
| **62ಎ** | **ಟಿಎಪಿಸಿಎಂಎಸ್, ಚಿಕ್ಕಬಳ್ಳಾಪುರ** | **ಕಟ್ಟಡ ನಿರ್ಮಾಣ** | **₹.10.00 ಲಕ್ಷ** |

**PR-235**
**S.C-25**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ
ಸಹಕಾರ ಇಲಾಖೆ

## ಸಹಕಾರ ಸಚಿವಾಲಯ
### ತಿದ್ದುಪಡಿ ಆದೇಶ

**ಸಂಖ್ಯೆ: ಸಿಒ 109 ಸಿಎಲ್ಎಂ 2014 ಬೆಂಗಳೂರು, ದಿನಾಂಕ: 11-03-2015.**

ಸರ್ಕಾರದ ಆದೇಶ ಸಂಖ್ಯೆ:ಸಿಒ **109 ಸಿಎಲ್ಎಂ 2014,** ದಿನಾಂಕ: 02-03-2015ರ ಆದೇಶ ಭಾಗದ ಕಂಡಿಕೆ 2ರಲ್ಲಿ "ಸಹಕಾರ ಸಂಘಗಳ ನಿಬಂಧಕರು ಸಂಬಂಧಿಸಿದ ನಿರ್ಮಿತಿ ಕೇಂದ್ರಗಳಿಗೆ ಬಿಡುಗಡೆ ಮಾಡಲು ಅಧಿಕಾರ ನೀಡಿದೆ" ಎಂಬ ಪದ ಮತ್ತು ವಾಕ್ಯಗಳಿಗೆ ಬದಲಾಗಿ "ಸಹಕಾರ ಸಂಘಗಳ ನಿಬಂಧಕರು ಸಂಬಂಧಿಸಿದ ನಿರ್ಮಿತಿ ಕೇಂದ್ರ ಹಾಗೂ ಲೋಕೋಪಯೋಗಿ ಇಲಾಖೆಗೆ ಬಿಡುಗಡೆ ಮಾಡಲು ಅಧಿಕಾರ ನೀಡಿದೆ" ಎಂದು ತಿದ್ದುಕೊಂಡು ಓದಿಕೊಳ್ಳತಕ್ಕದ್ದು. ಉಳಿದಂತೆ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**PR-236**
**S.C-50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ
ಸಹಕಾರ ಇಲಾಖೆ

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ
### ತಿದ್ದುಪಡಿ

**ಸಂಖ್ಯೆ: ಪಸಂಮೀ 06 ಪಸಸೇ 2015 ಬೆಂಗಳೂರು, ದಿನಾಂಕ: 27-01-2015.**

ಸರ್ಕಾರದ ಆದೇಶ ಸಂಖ್ಯೆ: **ಪಸಂಮೀ 175 ಪಸಸೇ 2013,** ದಿನಾಂಕ: 01-03-2014 ರಲ್ಲಿ ಮಂಜೂರಾತಿ ನೀಡಲಾದ 49 ಕುರಿ ಮತ್ತು ಉಣ್ಣೆ ಅಭಿವೃದ್ಧಿ ಉಪ ಕೇಂದ್ರಗಳ (ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳು) ಲೆಕ್ಕ ಶೀರ್ಷಿಕೆಯನ್ನು 2403-00-104-0-02 (101) ಎಂಬುದರ ಬದಲಾಗಿ ಜಿಲ್ಲಾ ಪಂಚಾಯತ್ ವಲಯದ ಯೋಜನೇತರ ಲೆಕ್ಕ ಶೀರ್ಷಿಕೆ 2403-00-101-0-61 ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

**PR-139**
**SC-100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಪ್ರಸನ್ನ**
ಪೀಠಾಧಿಕಾರಿ-2
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ-ಎ)

## ತೋಟಗಾರಿಕೆ ಸಚಿವಾಲಯ

**ವಿಷಯ :** ಚಿಕ್ಕಮಗಳುರು ಜಿಲ್ಲೆ ಶೃಂಗೇರಿ ತಾಲ್ಲೂಕಿನ ಆನೆಗುಂದ ತೋಟಗಾರಿಕೆ ಕ್ಷೇತ್ರದಲ್ಲಿನ 4.00 ಎಕರೆ ಜಮೀನಿನ ಒಡೆತನವನ್ನು ಮಾತ್ರ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಗೆ ವರ್ಗಾಯಿಸಲು ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ED/KSHDA/ಸತೋಅ2/27/2008-09/91 ದಿನಾಂಕ: 05-05-2014
2. ಸರ್ಕಾರದ ಆದೇಶ ಸಂ:ತೋಇ 71 ತೋಇವಿ 2013 ದಿ: 16-04-2013

**ಪ್ರಸ್ತಾವನೆ:**

ಮೇಲೆ ಕ್ರ.ಸಂ: (1)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ 10ನೇ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಶೃಂಗೇರಿ ತಾಲ್ಲೂಕಿನ ಆನೆಗುಂದ ತೋಟಗಾರಿಕೆ ಕ್ಷೇತ್ರದಲ್ಲಿ ಶೃಂಗೇರಿ ತೋಟಗಾರಿಕೆ ಸಂಶೋಧನಾ ಕೇಂದ್ರಕ್ಕಾಗಿ 6.00 ಎಕರೆ ಜಮೀನಿನ ಒಡೆತನವನ್ನು

ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಗೆ ವರ್ಗಾಯಿಸಲು ಸಮಿತಿಯು ತೀರ್ಮಾನಿಸಿದ ಅನ್ವಯ ಮೇಲೆ ಕ್ರ.ಸಂ: (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸದರಿ ತೋಟಗಾರಿಕೆ ಕ್ಷೇತ್ರದಲ್ಲಿ 6.00 ಎಕರೆ ಪ್ರದೇಶದ ಒಡೆತನವನ್ನು ವರ್ಗಾಯಿಸಲಾಗಿದೆ.

ತೋಟಗಾರಿಕೆ ಉಪ ನಿರ್ದೇಶಕರು (ಜಿಪಂ) ಚಿಕ್ಕಮಗಳೂರು ಇವರ ದಿ: 23–08–2013ರ ಪತ್ರದನ್ವಯ ಸರ್ಕಾರದ ಆದೇಶದಂತೆ ಶೃಂಗೇರಿ ತಾಲ್ಲೂಕಿನ ಆನೆಗುಂದ ತೋಟಗಾರಿಕೆ ಕ್ಷೇತ್ರದ 6.00 ಎಕರೆ ಪ್ರದೇಶದ ಒಡೆತನವನ್ನು ಹಸ್ತಾಂತರಿಸಲು ಕ್ರಮ ಕೈಗೊಳ್ಳುವ ಹಿನ್ನೆಲೆಯಲ್ಲಿ ಸದರಿ ಕ್ಷೇತ್ರದಲ್ಲಿ ಲಭ್ಯವಿರುವ ಪಹಣಿ ದಾಖಲಾತಿಗಳ ಪ್ರಕಾರ ಸರ್ವೆ ನಂ.169ರಲ್ಲಿ 5.00 ಎಕರೆ ಮತ್ತು ಸರ್ವೆ ನಂ.270ರಲ್ಲಿ 3.00 ಎಕರೆ ಒಟ್ಟು 8.00 ಎಕರೆ ವಿಸ್ತೀರ್ಣ ಹೊಂದಿದ್ದು, ಸದರಿ ಸರ್ವೆ ನಂಬರುಗಳಲ್ಲಿ ಸರ್ವೆ ಮಾಡಿಸಿದಾಗ ಸರ್ವೆ ನಂ. 169ರಲ್ಲಿ 5.00 ಎಕರೆ ಬದಲಿಗೆ 3.04 ಎಕರೆ (3.02 ಜಾಗ+0.02 ಎಕರೆ ಖರಾಬು) ಹಾಗೂ ಸರ್ವೆ ನಂ.270ರಲ್ಲಿ 3.00 ಎಕರೆ ಇರುವುದಾಗಿ ತಹಶೀಲ್ದಾರ್ ಕಛೇರಿಯಿಂದ ವರದಿ ನೀಡಿರುವ ಬಗ್ಗೆ ತಿಳಿಸಿರುತ್ತಾರೆ. ಮುಂದುವರೆದು, ಸರ್ಕಾರದ ಆದೇಶದನ್ವಯ 6.00 ಎಕರೆ ಪ್ರದೇಶವನ್ನು ಅಡಿಕೆ ಸಂಶೋಧನಾ ಕೇಂದ್ರಕ್ಕೆ ಹಸ್ತಾಂತರಿಸಿದ್ದಲ್ಲಿ ತೋಟಗಾರಿಕೆ ಇಲಾಖೆಗೆ ಕೇವಲ 2 ಗುಂಟೆ ಜಾಗ ಮಾತ್ರ ಉಳಿಯುವುದರಿಂದ ಇಲಾಖಾ ಕಾರ್ಯಚಟುವಟಿಕೆಗಳಿಗೆ ಮತ್ತು ಸಸ್ಯೋತ್ಪಾದನೆಗೆ ಜಾಗದ ಅಭಾವವಾಗುವ ಬಗ್ಗೆ ಹಾಗೂ ಇಲಾಖಾ ಚಟುವಟಿಕೆಗಳಿಗೆ ಕನಿಷ್ಠ 2.00 ಎಕರೆ ಪ್ರದೇಶದ ಅಗತ್ಯತೆ ಇರುವ ಬಗ್ಗೆ ತಿಳಿಸಿರುತ್ತಾರೆ.

ಮುಂದುವರೆದು, ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಪಂ) ಶೃಂಗೇರಿ ಇವರು ತಮ್ಮ ದಿ: 28–09–2013ರ ಪತ್ರದಲ್ಲಿ ಇಲಾಖಾ ಜಮೀನಿನ ಸದರಿ ವ್ಯತ್ಯಾಸವು ಕಂದಾಯ ಇಲಾಖೆಯವರು ನೀಡಿರುವ ನಕ್ಷೆಯಲ್ಲಿನ ದೋಷವು ತಾಂತ್ರಿಕ ದೋಷದಿಂದಾಗಿರುವ ಹಿನ್ನೆಲೆಯಲ್ಲಿ ಮಂಜೂರಾದ ವಿಸ್ತೀರ್ಣಕ್ಕಿಂತ ಸ್ವಾಧೀನಾನುಭವದ ವಿಸ್ತೀರ್ಣ ಕಡಿಮೆ ಇರುವ ಬಗ್ಗೆ ತಿಳಿಸಿರುತ್ತಾರೆ.

ಈ ವಿಷಯವನ್ನು ದಿ: 28–03–2014ರಂದು ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ 12ನೇ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಕೂಲಂಕಷವಾಗಿ ಚರ್ಚಿಸಿ ಚಿಕ್ಕಮಗಳೂರು ಜಿಲ್ಲೆ ಶೃಂಗೇರಿ ತಾಲ್ಲೂಕಿನ ಆನೆಗುಂದ ತೋಟಗಾರಿಕೆ ಕ್ಷೇತ್ರದಲ್ಲಿ ಅಡಿಕೆ ಸಂಶೋಧನಾ ಕೇಂದ್ರಕ್ಕಾಗಿ 4.00 ಎಕರೆ ಪ್ರದೇಶದ ಒಡೆತನವನ್ನು ಮಾತ್ರ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಗೆ ವಹಿಸಿ ಕೊಡಲು ಹಾಗೂ ಸದರಿ ಕ್ಷೇತ್ರದ ಇನ್ನುಳಿದ ಜಮೀನನ್ನು ತೋಟಗಾರಿಕೆ ಇಲಾಖೆಯ ಅಧೀನದಲ್ಲಿಯೇ ಉಳಿಸಿಕೊಳ್ಳಲು ಪರಿಷ್ಕೃತ ಪ್ರಸ್ತಾವನೆ ಸಲ್ಲಿಸಲು ಸಮಿತಿಯು ತೀರ್ಮಾನಿಸಿರುತ್ತದೆ.

ಈ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ ಶೃಂಗೇರಿ ತಾಲ್ಲೂಕಿನ ಆನೆಗುಂದ ತೋಟಗಾರಿಕೆ ಕ್ಷೇತ್ರದಲ್ಲಿ ಅಡಿಕೆ ಸಂಶೋಧನಾ ಕೇಂದ್ರಕ್ಕಾಗಿ 4.00 ಎಕರೆ ಪ್ರದೇಶದ ಒಡೆತನವನ್ನು ಮಾತ್ರ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಗೆ ವಹಿಸಿ ಕೊಡಲು ಹಾಗೂ ಇನ್ನುಳಿದ ಜಮೀನನ್ನು ತೋಟಗಾರಿಕೆ ಇಲಾಖೆಯ ಅಧೀನದಲ್ಲಿಯೇ ಉಳಿಸಿಕೊಳ್ಳಲು ಸರ್ಕಾರದ ಆದೇಶ ಸಂ: ತೋಇ 71 ತೋಇವಿ 2013 ದಿ: 16–04–2013ರಲ್ಲಿ ಸದರಿ ಕ್ಷೇತ್ರಕ್ಕೆ ಸಂಬಂಧಿಸಿದಂತೆ ನೀಡಲಾಗಿರುವ ಆದೇಶವನ್ನು ಮಾತ್ರ ರದ್ದುಪಡಿಸಿ ಪರಿಷ್ಕೃತ ಆದೇಶವನ್ನು ನೀಡಬೇಕೆಂದು ತೋಟಗಾರಿಕೆ ನಿರ್ದೇಶಕರು ಕೋರಿರುತ್ತಾರೆ.

ತೋಟಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ತೋಇ 345 ತೋಇವಿ 2014 ಬೆಂಗಳೂರು, ದಿನಾಂಕ: 06–11–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂ: ತೋಇ 71 ತೋಇವಿ 2013 ದಿ: 16–04–2013ರ ಆದೇಶ ಭಾಗದಲ್ಲಿನ ಕ್ರ.ಸಂ: 5ರಲ್ಲಿ ತೋಟಗಾರಿಕೆ ಸಂಶೋಧನಾ ಕೇಂದ್ರ, ಶೃಂಗೇರಿಯ 6 ಎಕರೆ ಜಮೀನಿನ ಬದಲಾಗಿ 4 ಎಕರೆ ಜಮೀನಿನ ಒಡೆತನವನ್ನು ಮಾತ್ರ ತೋಟಗಾರಿಕೆ ಇಲಾಖೆಯಿಂದ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಗೆ ವರ್ಗಾಯಿಸಿ ಪರಿಷ್ಕರಿಸಿ ಆದೇಶಿಸಿದೆ. ಉಳಿದಂತೆ ಸರ್ಕಾರದ ಆದೇಶ ಸಂ: ತೋಇ 71 ತೋಇವಿ 2013 ದಿ: 16–04–2013ರ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**PR-140**
**S.C-25**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ವಿ. ರಾಮಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಉನ್ನತೀಕರಿಸಿದ ವಿಶೇಷ ಕಾರ್ಯದರ್ಶಿ ಹುದ್ದೆಗೆ ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ನಿಗದಿಪಡಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 360 ಸಅಸೇ 2012; ದಿನಾಂಕ: 03–06–2014

2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 360 ಸಅಸೇ 2012; ದಿನಾಂಕ: 24–07–2014

**ಪ್ರಸ್ತಾವನೆ:–**

ಮೇಲಿನ (1)ರಲ್ಲಿ ಓದಲಾದ ಆದೇಶದಲ್ಲಿ, ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಪ್ರಸ್ತುತ ಇರುವ ಅಪರ ಕಾರ್ಯದರ್ಶಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ವಿಶೇಷ ಕಾರ್ಯದರ್ಶಿ ಹುದ್ದೆಯನ್ನಾಗಿ (ವೇತನ ಶ್ರೇಣಿ ರೂ.56,550–79800) ಉನ್ನತೀಕರಿಸಿ ಆದೇಶಿಸಲಾಗಿದೆ.

ಮೇಲಿನ (2)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಉನ್ನತೀಕರಿಸಿದ ವಿಶೇಷ ಕಾರ್ಯದರ್ಶಿ ಹುದ್ದೆಗೆ ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ಕಾರ್ಯ ವಿಧಾನವನ್ನು ನಿಗದಿಪಡಿಸಲಾಗಿದ್ದು, ಸದರಿ ಕಾರ್ಯಕಾರಿ ಆದೇಶವು ಆರು ತಿಂಗಳ ಕಾಲ ಮಾತ್ರ ಜಾರಿಯಲ್ಲಿದ್ದು, ಆರು ತಿಂಗಳ ನಂತರ ತನ್ನಿಂದ ತಾನೇ ರದ್ದಾಗುತ್ತದೆ.

ಆದ್ದರಿಂದ, ಸಚಿವಾಲಯದಲ್ಲಿ ಉನ್ನತೀಕರಿಸಿದ ವಿಶೇಷ ಕಾರ್ಯದರ್ಶಿ ಹುದ್ದೆಗೆ ನೇಮಕಾತಿ ವಿಧಾನವನ್ನು ನಿಗದಿಪಡಿಸಿ ಆದೇಶ ಸಂಖ್ಯೆ: ಸಿಆಸುಇ 360 ಸಅಸೇ 2012, ದಿನಾಂಕ: 24–07–2014 ರನ್ವಯ ಹೊರಡಿಸಿದ ಕಾರ್ಯಕಾರಿ ಆದೇಶದ ಅವಧಿಯು ದಿನಾಂಕ: 24–01–2015ಕ್ಕೆ ಮುಕ್ತಾಯವಾಗಿದ್ದು, ಸದರಿ ಆದೇಶವನ್ನು ಮತ್ತೆ ಆರು ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 37 ಸಲುಸೇ 2015, ಬೆಂಗಳೂರು, ದಿನಾಂಕ: 03ನೇ ಮಾರ್ಚ್, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಉನ್ನತೀಕರಿಸಿದ ವಿಶೇಷ ಕಾರ್ಯದರ್ಶಿ ಹುದ್ದೆಗೆ ನೇಮಕಾತಿ ವಿಧಾನವನ್ನು ನಿಗದಿಪಡಿಸಿ ಆದೇಶ ಸಂಖ್ಯೆ: ಸಿಆಸುಇ 360 ಸಅಸೇ 2012, ದಿನಾಂಕ: 24–07–2014ರನ್ವಯ ಹೊರಡಿಸಿದ ಕಾರ್ಯಕಾರಿ ಆದೇಶದ ಅವಧಿಯನ್ನು ದಿನಾಂಕ: 24–01–2015 ರಿಂದ ಅನ್ವಯವಾಗುವಂತೆ ಆರು ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ವಿಭಾಗವು ದಿನಾಂಕ: 27–02–2015 ರ ಟಿಪ್ಪಣಿ ಸಂಖ್ಯೆ: ಸಿಆಸುಇ 27 ಸೇನಿಡಿ 2015 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು–6)

**PR-183**

## ಆರ್ಥಿಕ ಸಚಿವಾಲಯ

**ವಿಷಯ :** ಮದ್ಯಸಾರ, ಭಾರತೀಯ ಮದ್ಯ, ಫೆನ್ನಿ ಉತ್ಪಾದನಾ ಡಿಸ್ಟಿಲರಿಗಳು, ಬ್ರಿವರಿಗಳು ಮತ್ತು ವೈನರಿಗಳಿಗೆ ಸಂಬಂಧಿಸಿದಂತೆ, ಉತ್ಪನ್ನಗಳ ಇಳುವರಿ ನಷ್ಟದ ಪ್ರಮಾಣವನ್ನು ನಿಗದಿಪಡಿಸಲು ಹಾಗೂ ಇತರೆ ತಾಂತ್ರಿಕ ಅಂಶಗಳ ಬಗ್ಗೆ ಸಲಹೆ ನೀಡಲು ರಚಿಸಲಾಗಿರುವ ಸ್ಥಾಯಿ ತಾಂತ್ರಿಕ ಸಮಿತಿಯ ಸದಸ್ಯರಿಗೆ ಉಪಸ್ಥಿತಿ ಭತ್ಯೆ ಮತ್ತು ಭತ್ಯೆಗಳನ್ನು ನೀಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 67 ಇಎಫ್‌ಎಲ್ 2014 ದಿನಾಂಕ: 13–10–2014
2) ಅಬಕಾರಿ ಆಯುಕ್ತರ ಪತ್ರ ಸಂಖ್ಯೆ: ಇಸಿಡಿ/81/ಆರ್‌ಇವಿ/2000 ದಿನಾಂಕ: 03–11–2014 ಮತ್ತು 22–01–2015

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಡಿಸ್ಟಿಲರಿಗಳಲ್ಲಿ ಉತ್ಪಾದಿಸುವ ಮದ್ಯಸಾರ, ಮದ್ಯ, ಫೆನ್ನಿ ಇತ್ಯಾದಿ ಉತ್ಪನ್ನಗಳ ಇಳುವರಿ, ಉತ್ಪಾದನಾ ನಷ್ಟ, ಇವುಗಳನ್ನು ನಿಗದಿಪಡಿಸುವ ನಿಟ್ಟಿನಲ್ಲಿ ಅಬಕಾರಿ ಆಯುಕ್ತರ ಅಧ್ಯಕ್ಷತೆಯಲ್ಲಿ ಒಟ್ಟು 10 ಸದಸ್ಯರನ್ನೊಳಗೊಂಡ ಸ್ಥಾಯಿ ತಾಂತ್ರಿಕ ಸಮಿತಿಯನ್ನು ಪುನರ್ ರಚಿಸಲಾಗಿತ್ತು. ಸಭೆಯನ್ನು ಆಯೋಜಿಸಿದಾಗ ಸ್ಥಾಯಿ ತಾಂತ್ರಿಕ ಸಮಿತಿಯ ಸದಸ್ಯರ ಪೈಕಿ ಅಧಿಕಾರೇತರ ಸದಸ್ಯರುಗಳಾದ ಡಾ॥ ಎಂ.ಬಿ. ಸಾಯಿದತ್ತಾ, ದಕ್ಷಿಣ ಕನ್ನಡ ಜಿಲ್ಲೆ, ಡಾ॥ ಎಸ್.ವಿ. ಪಾಟೀಲ್, ಪುಣೆ ಮತ್ತು ಡಾ॥ ಟಿ.ಎನ್.ಭವಾನಿಶಂಕರ್, ಮೈಸೂರು ಇವರುಗಳು ಹೊರಪ್ರದೇಶದಿಂದ ಬರಬೇಕಾಗಿರುವುದರಿಂದ, ಈ ಸದಸ್ಯರುಗಳಿಗೆ ಉಪಸ್ಥಿತಿ ಭತ್ಯೆ, ಪ್ರಯಾಣ ಭತ್ಯೆ ಇತ್ಯಾದಿ ಭತ್ಯೆಗಳನ್ನು ನಿಗದಿಪಡಿಸುವಂತೆ ಕೋರಿ ಅಬಕಾರಿ ಆಯುಕ್ತರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 67 ಇಎಫ್‌ಎಲ್ 2014, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2015**

ಸರ್ಕಾರವು ಪ್ರಸ್ತಾವನೆಯಲ್ಲಿ ತಿಳಿಸಿದ ಅಂಶಗಳ ಹಿನ್ನೆಲೆಯಲ್ಲಿ ಸ್ಥಾಯಿ ತಾಂತ್ರಿಕ ಸಮಿತಿಯ ಅಧಿಕಾರೇತರ ಸದಸ್ಯರುಗಳಿಗೆ ಪ್ರತಿ ಸಭೆಗೆ ರೂ. 2000/–(ರೂಪಾಯಿ ಎರಡು ಸಾವಿರ ಮಾತ್ರ) ಸಿಟ್ಟಿಂಗ್ ಫೀ ಮತ್ತು ರಾಜ್ಯ ಸರ್ಕಾರದ ಗ್ರೂಪ್–ಎ ಅಧಿಕಾರಿಗಳು ಅರ್ಹವಿರುವ ಪ್ರಯಾಣ ಭತ್ಯೆ/ದಿನ ಭತ್ಯೆ ಪಡೆಯಲು ಅರ್ಹರಿದ್ದಾರೆಂದು ಆದೇಶಿಸಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2039–00–001–0–01–015 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವೆಂಕಟೇಶ್.ಜಿ.**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಅಬಕಾರಿ)

**PR-194**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಸರ್ಕಾರಿ ಹಾಗೂ ಖಾಸಗಿ ನರ್ಸಿಂಗ್ ಕಾಲೇಜುಗಳಲ್ಲಿನ ಪಿ.ಬಿ.ಬಿ.ಎಸ್ಸಿ, ನರ್ಸಿಂಗ್ ವ್ಯಾಸಂಗಕ್ಕೆ ಸರ್ಕಾರಿ ಕೋಟಾದಡಿ ಆಯ್ಕೆಯಾಗುವ ಶುಶ್ರೂಷಕರಿಗೆ ಬೋಧನಾ ಶುಲ್ಕ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಆಡಳಿತಾಧಿಕಾರಿಗಳು, ವೈದ್ಯಕೀಯ ಶಿಕ್ಷಣ ಇವರ ಪತ್ರ ಸಂಖ್ಯೆ:ವೈಶಿನಿ/ಎನ್‌ಆರ್‌ಸಿ(1)/ಹೆಚ್‌ಇ/19/2012–13, ದಿ: 07–12–2012, 20–09–2013 & 14–07–2014.

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರಗಳಲ್ಲಿ ಮುಖ್ಯ ಆಡಳಿತಾಧಿಕಾರಿಗಳು, ವೈದ್ಯಕೀಯ ಶಿಕ್ಷಣ ಇವರು ಸರ್ಕಾರಿ ಹಾಗೂ ಖಾಸಗಿ ನರ್ಸಿಂಗ್ ಕಾಲೇಜುಗಳಲ್ಲಿ ಪಿ.ಬಿ.ಬಿ.ಎಸ್ಸಿ. ನರ್ಸಿಂಗ್ ವ್ಯಾಸಂಗಕ್ಕೆ ಸರ್ಕಾರಿ ಕೋಟಾದಡಿ ಆಯ್ಕೆಯಾಗುವ ಶುಶ್ರೂಷಕರು ಭರಿಸಬೇಕಾದ ಶುಲ್ಕದ ಬಗ್ಗೆ ಸರ್ಕಾರಿ ಆದೇಶವಿರುವುದಿಲ್ಲವಾದ್ದರಿಂದ ರೂ.9,000/–ಗಳ ಬೋಧನಾ ಶುಲ್ಕವನ್ನು ನಿಗದಿಪಡಿಸಿ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಸರ್ಕಾರಿ ಹಾಗೂ ಖಾಸಗಿ ನರ್ಸಿಂಗ್ ಕಾಲೇಜುಗಳಲ್ಲಿ ಪಿ.ಬಿ.ಬಿ.ಎಸ್ಸಿ. ನರ್ಸಿಂಗ್ ವ್ಯಾಸಂಗಕ್ಕೆ ಸರ್ಕಾರಿ ಕೋಟಾದಡಿ ಆಯ್ಕೆಯಾಗುವ ಶುಶ್ರೂಷಕರಿಗೆ 2015–16ನೇ ಸಾಲಿನಿಂದ ಅನ್ವಯವಾಗುವಂತೆ ರೂ. 9,000/–ಗಳ ಬೋಧನಾ ಶುಲ್ಕವನ್ನು ನಿಗದಿಪಡಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 97 ಆರ್‌ಜಿಯು 2013, ಬೆಂಗಳೂರು ದಿನಾಂಕ: 23-02-2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರಿ ಹಾಗೂ ಖಾಸಗಿ ನರ್ಸಿಂಗ್ ಕಾಲೇಜುಗಳಲ್ಲಿ ಪಿ.ಬಿ.ಬಿ.ಎಸ್ಸಿ. ನರ್ಸಿಂಗ್ ವ್ಯಾಸಂಗಕ್ಕೆ ಸರ್ಕಾರಿ ಕೋಟಾದಡಿ ಆಯ್ಕೆಯಾಗುವ ಶುಶ್ರೂಷಕರಿಗೆ 2015-16 ನೇ ಸಾಲಿನಿಂದ ಅನ್ವಯವಾಗುವಂತೆ ರೂ. 9,000/- ಗಳ ಬೋಧನಾ ಶುಲ್ಕವನ್ನು ನಿಗದಿಪಡಿಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಆಕುಕ 1793 ಆಂಆಸ 2014, ದಿ: 29-10-2014 ರಲ್ಲಿನ ಅಭಿಪ್ರಾಯದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಕೆ. ನಾಗವೇಣಿ**
ಸರ್ಕಾರದ ಅಧೀನ ಕಾರ್ಯದರ್ಶಿ-2,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ವೈದ್ಯಕೀಯ ಶಿಕ್ಷಣ)

**PR-196**
**SC-50**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಜಂಟಿ ಇಲಾಖಾ ವಿಚಾರಣೆಗಳ ಪ್ರಕರಣಗಳಲ್ಲಿ ವಿಚಾರಣಾಧಿಕಾರಿಗಳಾಗಿ ನೇಮಕವಾಗುವ ನಿವೃತ್ತ ಜಿಲ್ಲಾ ನ್ಯಾಯಾಧೀಶರಿಗೆ ಹೆಚ್ಚಿನ ಸಂಭಾವನೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 3 ಸೇಇವಿ 1996, ದಿನಾಂಕ: 24-04-1998.

2. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 6 ಸೇಇವಿ 2011, ದಿನಾಂಕ: 28-04-2011.

**ಪ್ರಸ್ತಾವನೆ:-**

ಕರ್ನಾಟಕ ನಾಗರಿಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರನ್ವಯ ಸರ್ಕಾರಿ ನೌಕರರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ, ಮೇಲೆ(1)ರಲ್ಲಿ ಓದಲಾದ ದಿನಾಂಕ: 24-04-1998ರ ಸರ್ಕಾರಿ ಆದೇಶದನ್ವಯ ನೇಮಿಸಿಕೊಳ್ಳಬಹುದಾಗಿದೆ. ಈ ರೀತಿ ವಿಚಾರಣಾಧಿಕಾರಿಯಾಗಿ ನೇಮಕವಾಗುವ ನಿವೃತ್ತ ಜಿಲ್ಲಾ ನ್ಯಾಯಾಧೀಶರಿಗೆ ನೀಡುವ ಸಂಚಿತ ಸಂಭಾವನೆಯನ್ನು ಉಲ್ಲೇಖ(2)ರಲ್ಲಿ ಓದಲಾದ ದಿನಾಂಕ: 28-04-2011ರ ಸರ್ಕಾರಿ ಆದೇಶದಲ್ಲಿ ಪ್ರತಿ ವಿಚಾರಣೆಗೆ ವಾಹನಭತ್ಯೆಯು ಸೇರಿದಂತೆ, ರೂ. 15000/-(ಹದಿನೈದು ಸಾವಿರ ರೂಪಾಯಿಗಳು) ನಿಗದಿಪಡಿಸಲಾಗಿದೆ.

ಇತ್ತೀಚಿನ ದಿನಗಳಲ್ಲಿ ಜಂಟಿ ಇಲಾಖಾ ವಿಚಾರಣಾ ಪ್ರಕರಣಗಳಲ್ಲಿ ವಿಚಾರಣಾಧಿಕಾರಿಗಳಾಗಿ ನೇಮಕಗೊಳ್ಳುವ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಸರ್ಕಾರವು ನಿಗದಿಪಡಿಸಿದ ಸಂಭಾವನೆ ರೂ.15000/-ಗಳನ್ನು ಪರಿಷ್ಕರಿಸುವಂತೆ ಕೋರುತ್ತಿರುವುದು ಮತ್ತು ಆರೋಪಿಗಳ ಸಂಖ್ಯೆ, ಪ್ರಕರಣದ ಗಹನತೆ ಇತ್ಯಾದಿಗಳನ್ನು ಉಲ್ಲೇಖಿಸಿ, ಹೆಚ್ಚಿನ ದರದಲ್ಲಿ ಸಂಭಾವನೆ ಪಾವತಿಸುವ ಕುರಿತು ಸರ್ಕಾರದ ವಿವಿಧ ಇಲಾಖೆಗಳಿಂದ ಕೋರಿಕೆಗಳು ಹೆಚ್ಚಿನ ಪ್ರಮಾಣದಲ್ಲಿ ಸ್ವೀಕೃತವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.

ಏಕವ್ಯಕ್ತಿ ಆರೋಜಪಿತರಾಗಿರುವ ಪ್ರಕರಣದಲ್ಲಿನ ವಿಚಾರಣೆ ಮತ್ತು ಜಂಟಿ ಇಲಾಖಾ ವಿಚಾರಣಾ ಪ್ರಕರಣದಲ್ಲಿನ ಪ್ರಕ್ರಿಯೆ ಒಂದೇ ತರಹದ್ದಾಗಿರುತ್ತದೆ. ಆದರೆ, ಜಂಟಿ ಇಲಾಖಾ ಪ್ರಕರಣಗಳಲ್ಲಿ ಆಪಾದಿತ ಅಧಿಕಾರಿ/ನೌಕರರ ಸಂಖ್ಯೆ, ಪರಿಶೀಲಿಸಬೇಕಾದ ದಸ್ತಾವೇಜುಗಳು ಮತ್ತು ಸಾಕ್ಷಿಗಳ ಪ್ರಮಾಣಕ್ಕೆ ಅನುಗುಣವಾಗಿ ವಿಚಾರಣಾಧಿಕಾರಿಗಳು ಹೆಚ್ಚಿನ ವೆಚ್ಚ, ಸಮಯ ವ್ಯಯಿಸಬೇಕಾಗುತ್ತದೆ ಮತ್ತು ಪರಿಶ್ರಮ ಹೆಚ್ಚಾಗುತ್ತದೆಯೆಂಬ ಅಂಶಗಳನ್ನು ಪರಿಗಣಿಸಿ, ಇಂತಹ ಪ್ರಕರಣಗಳಲ್ಲಿ ಸಂಭಾವನೆಯನ್ನು ಹೆಚ್ಚಿಸುವ ಬಗ್ಗೆ ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 45 ಸೇಇವಿ 2014, ದಿನಾಂಕ: 08-01-2015**

ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರಡಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳಾಗಿ ನೇಮಕವಾಗುವ ನಿವೃತ್ತ ಜಿಲ್ಲಾ ನ್ಯಾಯಾಧೀಶರಿಗೆ ಈಗಾಗಲೇ ದಿನಾಂಕ: 28-04-2011ರ ಆದೇಶದಲ್ಲಿ ನಿಗದಿಪಡಿಸಿರುವ ರೂ.15000/- (ಹದಿನೈದು ಸಾವಿರ ರೂಪಾಯಿಗಳು)ಗಳ ಸಂಭಾವನೆ (ವಾಹನ ಭತ್ಯೆಯು ಸೇರಿದಂತೆ)ಯನ್ನು ಏಕವ್ಯಕ್ತಿ ಆರೋಪಿತರಾಗಿರುವ ಇಲಾಖಾ ವಿಚಾರಣೆ ಪ್ರಕರಣಗಳಿಗೆ ಅನ್ವಯಿಸುವಂತೆ ಮುಂದುವರೆಸಲಾಗಿದೆ. ಜಂಟಿ ಇಲಾಖಾ ವಿಚಾರಣೆ ಪ್ರಕರಣಗಳಲ್ಲಿ ನೀಡಬಹುದಾದ ಸಂಭಾವನೆಯನ್ನು ವಾಹನ ಭತ್ಯೆಯು ಸೇರಿದಂತೆ ಈ ಕೆಳಗಿನಂತೆ ನಿಗದಿಪಡಿಸಲಾಗಿದೆ.

ಅ) ಇಬ್ಬರಿಂದ ಐದು ಆರೋಪಿತ ವ್ಯಕ್ತಿಗಳಿರುವ ಜಂಟಿ ಇಲಾಖಾ ವಿಚಾರಣಾ ಪ್ರಕರಣಗಳಿಗೆ ರೂ. 20,000/- (ಇಪ್ಪತ್ತು ಸಾವಿರ ರೂಪಾಯಿಗಳು).

ಆ) ಐದು ಆರೋಪಿತ ವ್ಯಕ್ತಿಗಳಿಗಿಂತ ಹೆಚ್ಚಿನ ಆರೋಪಿತ ವ್ಯಕ್ತಿಗಳ ಜಂಟಿ ಇಲಾಖಾ ವಿಚಾರಣಾ ಪ್ರಕರಣಗಳಿಗೆ ರೂ.25,000/- (ಇಪ್ಪತ್ತೈದು ಸಾವಿರ ರೂಪಾಯಿಗಳು).

ಆರ್ಥಿಕ ಇಲಾಖೆಯು ದಿನಾಂಕ: 07-11-2014ರ ಟಿಪ್ಪಣಿ ಸಂಖ್ಯೆ:ಆಇ 865 ವೆಚ್ಚ-12/2014ರಲ್ಲಿ ನೀಡಿದ ಸಹಮತಿಯನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಾ|| ಮಂಗಳ ಜಿ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು-1)

**PR-205**
**SC-100**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿನ ಶಾಖಾಧಿಕಾರಿ ಹುದ್ದೆಯನ್ನು ತಾತ್ಕಾಲಿಕವಾಗಿ ಅಧೀನ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಆರ್‌ಇಪಿ 255/2014, ದಿನಾಂಕ: 29–12–2014.

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರು ಶ್ರೀ ಎಂ.ಸಿ. ನಾಗರಾಜ್, ಶಾಖಾಧಿಕಾರಿ, ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯ ಇವರಿಗೆ ಅಧೀನ ಕಾರ್ಯದರ್ಶಿ ಹುದ್ದೆಗೆ ಮುಂಬಡ್ತಿ ದೊರೆಯುತ್ತಿರುವುದು ತಿಳಿದುಬಂದಿದ್ದು, ಶ್ರೀ ಎಂ.ಸಿ. ನಾಗರಾಜ್ ಇವರ ಸೇವೆಯು ಮಾನ್ಯ ಮುಖ್ಯಮಂತ್ರಿಯವರ ಕಛೇರಿಗೆ ಅವಶ್ಯಕವಾಗಿರುವುದರಿಂದ ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿನ ಶಾಖಾಧಿಕಾರಿ ಹುದ್ದೆಯನ್ನು ಅಧೀನ ಕಾರ್ಯದರ್ಶಿ ಹುದ್ದೆಗೆ ಉನ್ನತಿಕರಿಸಿ, ಶ್ರೀ ಎಂ.ಸಿ. ನಾಗರಾಜ್ ಇವರಿಗೆ ಅಧೀನ ಕಾರ್ಯದರ್ಶಿ ವೃಂದಕ್ಕೆ ಬಡ್ತಿ ನೀಡಿದ ನಂತರ ಸದರಿ ಹುದ್ದೆಗೆ ನೇಮಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 16 ಸಅಸೇ 2015 ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2015.**

ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಕೋರಿಕೆ ಹಿನ್ನೆಲೆಯಲ್ಲಿ ಶ್ರೀ ಎಂ.ಸಿ. ನಾಗರಾಜ್ ಇವರ ಸೇವೆಯು ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಅಗತ್ಯವಿರುವವರೆಗೆ ಅಥವಾ ಶ್ರೀ ಎಂ.ಸಿ. ನಾಗರಾಜ್ ಇವರು ವಯೋ ನಿವೃತ್ತಿ ಹೊಂದುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿನ ಶಾಖಾಧಿಕಾರಿ ಹುದ್ದೆಯನ್ನು ತಾತ್ಕಾಲಿಕವಾಗಿ ಅಧೀನ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 56 ಸೇ–3/15, ದಿನಾಂಕ: 28–01–2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು–6)

**PR-207**

## ಆರ್ಥಿಕ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ (ಕೆಲಸಗಳ ಹಂಚಿಕೆ) ನಿಯಮಗಳು, 1977ರ ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ:**
1. ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಪತ್ರ ಸಂಖ್ಯೆ: ಸಿಎಸ್‌ಎ 1 ಐಡಿಎಫ್ 2012/2896 ದಿನಾಂಕ: 20–11–2014 ಮತ್ತು 08–12–2014.
2. ಅನಧಿಕೃತ ಟಿಪ್ಪಣಿ ಸಂಖ್ಯೆ:ಸಿಆಸುಇ 01 ಎಆರ್‌ಬಿ 2015 ದಿನಾಂಕ: 02–02–2015.

**ಪ್ರಸ್ತಾವನೆ:–**

ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ಮೇಲೆ ಓದಲಾದ ಪತ್ರದಲ್ಲಿ ರಾಜ್ಯ ಲೆಕ್ಕಪತ್ರ ಇಲಾಖೆಯನ್ನು ಪುನರ್ ಸಂಘಟಿಸುತ್ತಿರುವುದರಿಂದ ಇಲಾಖೆಯ ಹೆಸರನ್ನು ಬದಲಾಯಿಸುವ ಕುರಿತು ಪರಾಮರ್ಶಿಸಿದ್ದು, C&AG ಮಾದರಿಯಲ್ಲಿ (Indian Audit & Accounts Department) ಇಲಾಖೆಯ ಹೆಸರನ್ನು **"**Karnataka State Audit and Accounts Department**"** ಎಂದೂ, ಕನ್ನಡದಲ್ಲಿ **"ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆ"** ಎಂದು ಬದಲಾಯಿಸುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಮೇಲೆ ಓದಲಾದ ಟಿಪ್ಪಣಿ(2)ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರು ರಾಜ್ಯ ಲೆಕ್ಕಪತ್ರ ಇಲಾಖೆಯ ಹೆಸರನ್ನು **"ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆ"** ಎಂದು ಮರು ನಾಮಕರಣಗೊಳಿಸಲು ಒಂದು ಸರ್ಕಾರದ ಆದೇಶವನ್ನು ಹೊರಡಿಸಿ, ಅದರ ಪ್ರತಿಯನ್ನು ಸಿ.ಆ.ಸು.ಇಲಾಖೆ (ಸೇವಾ ನಿಯಮಗಳು) ವಿಭಾಗಕ್ಕೆ ಒದಗಿಸಲು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮರುನಾಮಕರಣ ಕುರಿತು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 224 ರಾಲೆಪ 2012, ಬೆಂಗಳೂರು, ದಿನಾಂಕ: 02–03–2015.**

ರಾಜ್ಯ ಲೆಕ್ಕಪತ್ರ ಇಲಾಖೆಯ ಹೆಸರನ್ನು **"ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆ"** ।(**Karnataka State Audit and Accounts Department**) ಎಂದು ತಕ್ಷಣದಿಂದ ಜಾರಿಗೆ ಬರುವಂತೆ ಮರು ನಾಮಕರಣಗೊಳಿಸಿ ಆದೇಶಿಸಲಾಗಿದೆ.

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು)ಯು ಈ ಬಗ್ಗೆ ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳು 1977ಕ್ಕೆ ಸೂಕ್ತ ತಿದ್ದುಪಡಿ ತರಲು ಕ್ರಮ ಕೈಗೊಳ್ಳುತ್ತದೆ.

ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ, ಕರ್ನಾಟಕ ಆರ್ಥಿಕ ಸಂಹಿತೆ, ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ಇವುಗಳಿಗೆ ಸೂಕ್ತ ತಿದ್ದುಪಡಿ ಮಾಡಲು ಸಂಬಂಧಪಟ್ಟ ಇಲಾಖೆಗಳು ಕ್ರಮ ಕೈಗೊಳ್ಳುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

PR-209

**ಎನ್. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಅಪಜೀ 30 ಎಫ್‌ಎಪಿ 2014 ಬೆಂಗಳೂರು, ದಿನಾಂಕ: 12-02-2015.**

**ವಿಷಯ :** ರಾಜ್ಯದಲ್ಲಿ ಅರಣ್ಯ ಇಲಾಖೆಯಿಂದ ಕೈಗೊಳ್ಳಲಾಗುವ ಎಲ್ಲಾ ಸಸಿ ನೆಡುವ ಯೋಜನೆಗಳಡಿ ಜೈವಿಕ ಇಂಧನ ನೆಡುತೋಪು ಬೆಳೆಸಲು ಆದ್ಯತೆ ನೀಡುವ ಕುರಿತು.

ರಾಷ್ಟ್ರದಲ್ಲಿ ಅರಣ್ಯ ಮತ್ತು ಪರಿಸರ ಸಂರಕ್ಷಣೆ, ಬರಗಾಲ ತಡೆಗಟ್ಟುವಿಕೆ ಮತ್ತು ಮಣ್ಣು ಹಾಗೂ ಜಲ ಸಂರಕ್ಷಣೆಗಾಗಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಹಲವಾರು ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುತ್ತಿವೆ. ಈ ಯೋಜನೆಗಳಡಿ ಲಭಿಸುವ ಬಹುತೇಕ ಅನುದಾನ ಅರಣ್ಯೀಕರಣಕ್ಕಾಗಿ ವಿನಿಯೋಗಿಸಲಾಗುತ್ತಿದೆ. ಸರ್ಕಾರದ ವಿವಿಧ ಯೋಜನೆಗಳಡಿ ಲಭಿಸುವ ಅನುದಾನದಿಂದ ಹಾಗೂ ಉದ್ಯೋಗ ಭರವಸೆ ಯೋಜನೆಯಡಿಯ ಅನುದಾನದಿಂದ ಆಯಾ ಪ್ರದೇಶಗಳಿಗೆ ಸೂಕ್ತವೆನಿಸುವ ಮರಗಳ ತಳಿಗಳಾದ ಹೊಂಗೆ, ಬೇವು ಹಿಪ್ಪೆ, ಸೀಮರೂಬ, ಸುರಹೊನ್ನೆ, ನಾಗಸಂಪಿಗೆ, ಧೂಪ ಇತ್ಯಾದಿ ಜೈವಿಕ ಇಂಧನ ಸಸಿಗಳನ್ನು ಬೆಳೆಸುವುದು ಬಹಳಷ್ಟು ಪ್ರಯೋಜನಕಾರಿಯೆನಿಸಿದೆ.

ಹೊಂಗೆ, ಬೇವು, ಹಿಪ್ಪೆ, ಸೀಮರೂಬ, ಸುರಹೊನ್ನೆ, ನಾಗಸಂಪಿಗೆ, ಧೂಪ ಇತ್ಯಾದಿ ಜೈವಿಕ ಇಂಧನ ಸಸಿಗಳನ್ನು ರೈತರ ಜಮೀನಿನ ಬದು ಹಾಗೂ ಬೇಲಿಗುಂಟ ನೆಡುವುದು, ಸರ್ಕಾರಿ ಒಡೆತನದ ಬರಡು ಹಾಗೂ ಬಂಜರು ಭೂಮಿಯಲ್ಲಿ ನೆಡತೋಪು ಬೆಳೆಸುವುದು, ಬರಗಾಲ ತಡೆಗಟ್ಟುವಲ್ಲಿ ಹಾಗೂ ಜಲ ಸಂರಕ್ಷಣೆ ಕಾರ್ಯಗಳಲ್ಲಿ ಅಧಿಕ ಪ್ರಮಾಣದಲ್ಲಿ ಬೆಳೆಸಲು ಕ್ರಮ ಕೈಗೊಳ್ಳುವುದು ಹಾಗೂ ರಾಜ್ಯದ ಎಲ್ಲಾ ಯೋಜನೆಗಳ ಅನುಷ್ಠಾನದಲ್ಲಿ ಆಯಾ ಪ್ರದೇಶಗಳಿಗೆ ಸೂಕ್ತವೆನಿಸುವ ಅರಣ್ಯೀಕರಣ ಕಾಮಗಾರಿಗಳಡಿ ಜೈವಿಕ ಇಂಧನ ಸಸಿಗಳನ್ನು ನೆಡುವ ಕಾರ್ಯ ಆದ್ಯತಾವಲಯವೆಂದು ಪರಿಗಣಿಸಿ, ಅನುಷ್ಠಾನಗೊಳಿಸಲು ಅಗತ್ಯ ಕ್ರಮ ಕೈಗೊಳ್ಳುವಂತೆ ಈ ಮೂಲಕ ಸೂಚಿಸಿದೆ.

**ಮದನಗೋಪಾಲ.ಎಂ**

PR-214

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## FOREST, ECOLOGY AND ENVIRONMENT SECRETARIAT

**Subject:** Guidelines for giving permission to the people to collect the Biological materials from forest areas for scientific research.

**Read:** Letter No: PCCF/C/GL-No/2014-15, dated: 26-06-2014 of Principal Chief Conservator of forest (Head of Forest Force), Bangalore.

Preamble:

In his letter read at (1) above, the Principal Chief Conservator of forest (Head of Forest Force), Bengaluru has submitted a proposal to constitute guidelines for giving permission to the people to collect the Biological materials from forest areas for scientific research as large number of applications are received from people to conduct scientific research in forest areas in the absence of suitable guidelines to follow while giving permission.

The proposal of Principal Chief Conservator of forest (Wildlife) and Chief Wildlife Warden has been examined in detail, Hence the following order,

**GOVERNMENT ORDER NO: FEE 404 FWL 2014 BENGALURU, DATED: 20-01-2015.**

As explained in the preamble, the Government is hereby issues the guidelines for giving permission to the people to collect Biological materials from forest areas for scientific research as given in annexure to this order.

By Order and in the name of the
Governor of Karnataka

PR-178
SC-150

**S.P.Patil**
Under Secretary to Government
Forest, Ecology and Environment Department.

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ 2013-14ನೇ ಸಾಲಿಗೆ ಶಾಸನಬದ್ಧ ಲೆಕ್ಕಪರಿಶೋಧಕರ ನೇಮಕಾತಿ ಬಗ್ಗೆ.

**ಓದಲಾಗಿದೆ:** 3) ಆದೇಶ ಸಂಖ್ಯೆ:ಸಇ 39 ರಾಉನಿ 2012, ದಿನಾಂಕ: 23-01-2013.

4) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಉಗ್ರಾಣ ನಿಗಮ ಇವರ ಪತ್ರ ಸಂ:KSWC/ACT/APP/SA'S/22/4446/2014-15 ದಿನಾಂಕ: 20-10-2014.

**ಪ್ರಸ್ತಾವನೆ:-**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ 2012-13ನೇ ಸಾಲಿಗೆ ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಶಾಸನಬದ್ಧ ಲೆಕ್ಕಪರಿಶೋಧಕರನ್ನಾಗಿ ಶ್ರೀ ಪಿ.ಚಂದ್ರಶೇಖರ್, ಚಾರ್ಟರ್ಡ್ ಅಕೌಂಟೆಂಟ್, ಬೆಂಗಳೂರು ಇವರನ್ನು ನೇಮಕ ಮಾಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಉಗ್ರಾಣ ನಿಗಮ ಇವರ ಪತ್ರದಲ್ಲಿ ನವದೆಹಲಿಯ ಲೆಕ್ಕನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರ ಹಿರಿಯ ಆಡಳಿತಾಧಿಕಾರಿಗಳು ದಿನಾಂಕ: 26-08-2013 ರಂದು ಪತ್ರ ಬರೆದು ಶ್ರೀ ಪಿ.ಚಂದ್ರಶೇಖರ್, ಚಾರ್ಟರ್ಡ್ ಅಕೌಂಟೆಂಟ್ ಇವರನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ 2013-14ನೇ ಸಾಲಿಗೆ ಶಾಸನಬದ್ಧ ಲೆಕ್ಕಪರಿಶೋಧಕರನ್ನಾಗಿ ನೇಮಕ ಮಾಡಲು/ಮರು ನೇಮಕ ಮಾಡುವಂತೆ ಸಲಹೆ ಮಾಡಿರುತ್ತಾರೆ.

ಆದ್ದರಿಂದ 2013-14ನೇ ಸಾಲಿಗೆ ಶ್ರೀ ಪಿ.ಚಂದ್ರಶೇಖರ್, ಚಾರ್ಟಡ್ ಅಕೌಂಟೆಂಟ್, ಬೆಂಗಳೂರು ಇವರನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಶಾಸನಬದ್ಧ ಲೆಕ್ಕಪರಿಶೋಧಕರನ್ನಾಗಿ ಮರು ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

### ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಸಇ 55 ರಾಉನಿ 2014 ಬೆಂಗಳೂರು, ದಿನಾಂಕ 26-12-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ನವದೆಹಲಿಯ ಲೆಕ್ಕನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರ ಹಿರಿಯ ಆಡಳಿತಾಧಿಕಾರಿಗಳ ಪತ್ರ ದಿನಾಂಕ: 26-08-2013 ರಲ್ಲಿ ವಿಧಿಸಿರುವ ಷರತ್ತಿಗೊಳಪಟ್ಟು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ 2013-14ನೇ ಸಾಲಿಗೆ ಶಾಸನಬದ್ಧ ಲೆಕ್ಕಪರಿಶೋಧಕರನ್ನಾಗಿ ಶ್ರೀ ಪಿ.ಚಂದ್ರಶೇಖರ್, ಚಾರ್ಟರ್ಡ್ ಅಕೌಂಟೆಂಟ್ (ಬಿ.ಎ.ಓ219)ಎಸ್ 512-514, ಮಣಿಪಾಲ್ ಸೆಂಟರ್, ಸಂಖ್ಯೆ 47, ಡಿಕನ್‌ಸನ್ ರಸ್ತೆ, ಬೆಂಗಳೂರು-42 ಇವರನ್ನು ಮರು ನೇಮಕ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

PR-184

**ಎ.ಎಸ್.ವಿಶ್ವೇಶ್ವರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ-2

ಸಹಕಾರ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ :** ಪ್ರೋತ್ಸಾಹ ಧನ, ಸಹಾಯಧನ/ಗೌರವಧನ ಮುಂತಾದವುಗಳನ್ನು ಖಜಾನೆಯ ಆರ್.ಟಿ.ಜಿ.ಎಸ್/ಎನ್.ಇ.ಎಫ್.ಟಿ. ಮುಖಾಂತರ ನೇರವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಜಮೆ ಮಾಡುವ ಕುರಿತು.

**ಓದಲಾಗಿದೆ:** 3) ಸರ್ಕಾರದ ಆದೇಶ ಸಂಖ್ಯೆ:ಆಇ 18 ಬಿಜಿಎಲ್ 2004 ದಿನಾಂಕ: 13-03-2005

4) ಸರ್ಕಾರದ ಸುತ್ತೋಲೆ ಸಂಖ್ಯೆ: ಆಇ 42 **TAR** 2005, ದಿನಾಂಕ: 26-07-2005.

**ಪ್ರಸ್ತಾವನೆ:-**

1. ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ರಾಜ್ಯ ಹುಜೂರ್ ಖಜಾನೆಯಿಂದ ಸೆಳೆಯಲಾಗುವ ಎಲ್ಲಾ ವೇತನ ಪಾವತಿಗಳನ್ನು ಇಸಿಎಸ್ ಮೂಲಕ ನೇರವಾಗಿ ನೌಕರರ ಬ್ಯಾಂಕ್ ಖಾತೆಗೆ ಜಮೆ ಮಾಡಲು ಆದೇಶಿಸಲಾಗಿದ್ದು, ಮೇಲೆ (2)ರಲ್ಲಿ ಓದಲಾದ ಸುತ್ತೋಲೆಯಲ್ಲಿ ಎಲ್ಲಾ ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಗಳಿಗೆ ನೌಕರರ ವೇತನಗಳನ್ನು ನೇರವಾಗಿ ಅವರ ಬ್ಯಾಂಕ್ ಖಾತೆಗೆ ಏಜೆನ್ಸಿ ಬ್ಯಾಂಕ್ ಮೂಲಕ ಜಮೆ ಮಾಡುವಂತೆ ಸೂಚಿಸಲಾಯಿತು.
2. ಆದರೆ, ವೇತನ ಹೊರತುಪಡಿಸಿ ಯಾವುದೇ ಮೊತ್ತವನ್ನು ಖಜಾನೆಯಿಂದ/ಏಜೆನ್ಸಿ ಬ್ಯಾಂಕ್‌ನಿಂದ ನೇರವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಜಮೆ ಮಾಡಲು ನಿಯಮಗಳಲ್ಲಿ ಅವಕಾಶವಿಲ್ಲದ್ದರಿಂದ ಸರ್ಕಾರದ ವಿವಿಧ ಇಲಾಖೆಗಳು, ವಿವಿಧ ಯೋಜನೆಗಳಡಿ ಖಜಾನೆಯಿಂದ ಅನುದಾನ ಬಿಲ್ಲಿನ ಮೇಲೆ ಸೆಳೆದು ಇಲಾಖಾಧಿಕಾರಿಗಳ ಬ್ಯಾಂಕ್ ಖಾತೆಯಲ್ಲಿಟ್ಟು ಸಹಾಯಧನ/ಪ್ರೋತ್ಸಾಹ ಧನ/ಗೌರವಧನವನ್ನು ಆರ್.ಟಿ.ಜಿ.ಎಸ್/ಎನ್.ಇ.ಎಫ್.ಟಿ ಮೂಲಕ ನೇರವಾಗಿ ಫಲಾನುಭವಿಗಳ ಖಾತೆಗೆ ಪಾವತಿಸಲು ಬ್ಯಾಂಕ್ ಖಾತೆಗಳನ್ನು ತೆರೆಯಲು ಅನುಮತಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆಗಳನ್ನು ಸಲ್ಲಿಸುತ್ತಿವೆ.
3. ಕರ್ನಾಟಕ ಆರ್ಥಿಕ ಸಂಹಿತೆಯ ಪ್ರಕಾರ ಇಲಾಖಾಧಿಕಾರಿಗಳ ಹೆಸರಿನಲ್ಲಿ ಬ್ಯಾಂಕ್ ಖಾತೆಯನ್ನು ತೆರೆಯಲು ಅವಕಾಶವಿರುವುದಿಲ್ಲ. ಯೋಜನೆಗಳನ್ನು ಅನುಷ್ಠಾನಗೊಳಿಸಲು ಸರ್ಕಾರದಿಂದ ಬಿಡುಗಡೆಗೊಳಿಸಿದ ಅನುದಾನಗಳನ್ನು ಖಜಾನೆ ಮೂಲಕ ಸೆಳೆದು ಬ್ಯಾಂಕ್ ಖಾತೆಯಲ್ಲಿಟ್ಟು "ಸಂಚಿತನಿಧಿ" ಯಿಂದ ಹೊರಗೆ ವ್ಯವಹರಿಸುವ ಬಗ್ಗೆ ಮಹಾಲೇಖಪಾಲರ ಆಕ್ಷೇಪಣೆಯಾಗಿರುತ್ತದೆ. ಹಲವು ಫಲಾನುಭವಿಗಳಿಗೆ ನೇರವಾಗಿ ಹಣ ಸಂದಾಯವಾಗದೆ ಹಣ ದುರುಪಯೋಗವಾಗುವ ಸಂಭವವು ಸಹಾ ಇರುತ್ತದೆ.

4. ಆದರೆ ಖಜಾನೆಯ ಏಜೆನ್ಸಿ ಬ್ಯಾಂಕ್ ಮೂಲಕ ಆಯ್ಕೆಯಾದ ಫಲಾನುಭವಿಗಳ ಬ್ಯಾಂಕ್ ಖಾತೆಗೆ ನೇರವಾಗಿ ಸಹಾಯಧನ ಮುಂತಾದವುಗಳನ್ನು ಜಮೆ ಮಾಡುವುದರಿಂದ ವಿಳಂಬವನ್ನು ತಪ್ಪಿಸಬಹುದಲ್ಲದೆ ಇಲಾಖೆಗಳಲ್ಲಿ ಲೆಕ್ಕ ಪತ್ರಗಳ ಗುಣಮಟ್ಟವನ್ನು ಹೆಚ್ಚಿಸಿ, ಸಂಭವನೀಯ ಹಣ ದುರುಪಯೋಗವಾಗುವುದನ್ನು ತಡೆಹಿಡಿಯಬಹುದಾಗಿದೆ ಎಂಬುದನ್ನು ಮನಗಂಡು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 47 ಟಿಎಆರ್ 2014, ಬೆಂಗಳೂರು, ದಿನಾಂಕ: 22-12-2014**

ಸರ್ಕಾರದ ವಿವಿಧ ಇಲಾಖೆಗಳು ತಮ್ಮ ಇಲಾಖೆಗೆ ಸಂಬಂಧಿಸಿದಂತೆ ಸಹಾಯಧನ/ಪ್ರೋತ್ಸಾಹಧನ/ಗೌರವಧನ ಮುಂತಾದವುಗಳನ್ನು ಫಲಾನುಭವಿಗಳಿಗೆ RTGS/NEFT ಮುಖಾಂತರ ನೇರವಾಗಿ ವಿತರಿಸುವ ಸಂದರ್ಭದಲ್ಲಿ ಇಲಾಖಾಧಿಕಾರಿಗಳ ಹೆಸರಿನಲ್ಲಿ ಬ್ಯಾಂಕ್ ಖಾತೆ ತೆರೆದು ಅನುಷ್ಠಾನಗೊಳಿಸುವ ಬದಲಾಗಿ ಫಲಾನುಭವಿಗಳ ಹೆಸರು,ಮಂಜೂರಾದ ಮೊತ್ತ, ಫಲಾನುಭವಿಗಳ ಬ್ಯಾಂಕ್ ಖಾತೆ ಸಂಖ್ಯೆ, ಬ್ಯಾಂಕಿನ ಐ.ಎಫ್.ಎಸ್.ಸಿ. ಸಂಕೇತ ಮುಂತಾದ ವಿವರಗಳೊಂದಿಗೆ ಖಜಾನೆಗೆ ಹಣಸೆಳೆಯುವ ಅಧಿಕಾರಿಯು **(DDO)** ಸಾದಿಲ್ವಾರು ಬಿಲ್ಲನ್ನು ಸಲ್ಲಿಸುವುದು.

2. ಸಂಬಂಧಪಟ್ಟ ಹಣಸೆಳೆಯುವ ಅಧಿಕಾರಿಯು ಈ ರೀತಿ ವಿವರಗಳನ್ನು ಸಲ್ಲಿಸುವ ಮೊದಲು ಫಲಾನುಭವಿಗಳು ಸಂಬಂಧಪಟ್ಟ ಬ್ಯಾಂಕ್ ಶಾಖೆಯಲ್ಲಿ ಚಾಲ್ತಿಯಲ್ಲಿರುವ ಬ್ಯಾಂಕ್ ಖಾತೆ ಹೊಂದಿರುವ ಬಗ್ಗೆ ಸಂಬಂಧಪಟ್ಟ ಬ್ಯಾಂಕ್ ಶಾಖೆ ವ್ಯವಸ್ಥಾಪಕರಿಂದ ಫಲಾನುಭವಿಗಳ ಬ್ಯಾಂಕ್ ಖಾತೆ ಸಂಖ್ಯೆ, IFSC ಸಂಕೇತ ಮುಂತಾದ ಸಂಪೂರ್ಣ ಮಾಹಿತಿಯನ್ನು ಧೃಢೀಕರಿಸಿ ಪಡೆದುಕೊಳ್ಳುವುದು. ಫಲಾನುಭವಿಗಳ ಗುರುತು (Identity) ಹಾಗೂ ಮಂಜೂರಾದ ಮೊತ್ತದ ಬಗ್ಗೆ ದೃಢ ಪಡಿಸಿಕೊಳ್ಳುವ ಜವಾಬ್ದಾರಿ ಹಣಸೆಳೆಯುವ ಅಧಿಕಾರಿಯೇ ಹೊಂದಿರುತ್ತಾರೆ.

3. ಸಂಬಂಧಪಟ್ಟ ಖಜಾನೆಯು ಸಾದಿಲ್ವಾರು ಬಿಲ್ಲಿನಲ್ಲಿನ ಒಟ್ಟು ಮೊತ್ತಕ್ಕೆ ಏಜೆನ್ಸಿ "ಬ್ಯಾಂಕ್ ವ್ಯವಸ್ಥಾಪಕರಿಗೆ – RTGS/NEFT ಪಾವತಿಗಾಗಿ" ಎಂದು ಧನಾದೇಶವನ್ನು ನೀಡುವುದು.

4. ಹಣ ಸೆಳೆಯುವ ಅಧಿಕಾರಿಗಳು ಖಜಾನೆಯಿಂದ ಏಜೆನ್ಸಿ ಬ್ಯಾಂಕ್ ಹೆಸರಿಗೆ ನೀಡಲಾದ ಧನಾವೇಶವನ್ನು ಮೇಲಿನ ಕಂಡಿಕೆ ಒಂದರಲ್ಲಿ ತಿಳಿಸಲಾದ ವಿವರಗಳು ಹಾಗೂ RTGS/NEFT Mandate Form ನೊಂದಿಗೆ ಏಜೆನ್ಸಿ ಬ್ಯಾಂಕ್‌ಗೆ ಸಲ್ಲಿಸಿದಲ್ಲಿ ಏಜೆನ್ಸಿ ಬ್ಯಾಂಕು ಅನುಬಂಧದಲ್ಲಿ ತೋರಿಸಿರುವ ಫಲಾನುಭವಿಗಳ ಖಾತೆಗೆ ನೇರವಾಗಿ RTGS/NEFT ಮುಖಾಂತರ ಮೊತ್ತಗಳನ್ನು ವರ್ಗಾವಣೆ ಮಾಡುವುದು.

5. ಫಲಾನುಭವಿಗಳ ಬ್ಯಾಂಕ್ ಖಾತೆಗೆ ಜಮೆಯಾಗದೆ ಹಿಂದಿರುಗಿಸಲ್ಪಟ್ಟ ಮೊತ್ತಗಳ ಬಗ್ಗೆ ಏಜೆನ್ಸಿ ಬ್ಯಾಂಕು, ಸಂಬಂಧಪಟ್ಟ ಲೆಕ್ಕ ಶೀರ್ಷಿಕೆ, ಬ್ಯಾಂಕ್ ಖಾತೆ ಸಂಖ್ಯೆ, ಹಿಂದಿರುಗಿಸಲ್ಪಟ್ಟ ಮೊತ್ತ, ಕಾರಣಗಳು ಮುಂತಾದ ವಿವರಗಳನ್ನು ಹೊಂದಿರುವ ಪಟ್ಟಿಯನ್ನು ಖಜಾನೆಗೆ ಕಳುಹಿಸುವುದಲ್ಲದೆ, ಆ ರೀತಿ ಹಿಂದಿರುಗಿಸಲ್ಪಟ್ಟ ಒಟ್ಟು ಮೊತ್ತವನ್ನು ಖಜಾನೆಯ "Government Surpense ಲೆಕ್ಕ ಶೀರ್ಷಿಕೆ '8658-00-102-6-25-NEFT"ಗೆ ಅಥವಾ "8658-00-102-6-26 RTGS ಗೆ ಜಮೆ ಮಾಡುವುದು.

6. ಸಂಬಂಧಪಟ್ಟ ಖಜಾನೆ ಅಧಿಕಾರಿ ರವರು ಈ ರೀತಿ ಹಿಂದಿರುಗಿಸಲ್ಪಟ್ಟ ವಿವರಗಳನ್ನು ಸಂಬಂಧಪಟ್ಟ DDO ಗೆ ಕಳುಹಿಸತಕ್ಕದ್ದು DDO ರವರು ತಪ್ಪುಗಳಿದ್ದಲ್ಲಿ ಸರಿಪಡಿಸಿ ಪುನಃ "8658-00-102-6-25- NEFT" ಅಥವಾ "8658-00-102-6-26 RTGS" ಲೆಕ್ಕ ಶೀರ್ಷಿಕೆಗಳಿಂದ ಹಣ ಸೆಳೆದು ಫಲಾನುಭವಿಗಳ ಖಾತೆಗೆ ಪಾವತಿಸುವ ಕ್ರಮವನ್ನು ವಹಿಸತಕ್ಕದ್ದು. ಒಂದುವೇಳೆ 3 ತಿಂಗಳೊಳಗೆ DDO ಕ್ರಮ ವಹಿಸಿದಿದ್ದಲ್ಲಿ '8658-00-102-6-25-NEFT" ಅಥವಾ "8658-00-102-6 RTGS" ಲೆಕ್ಕ ಶೀರ್ಷಿಕೆಗಳಲ್ಲಿರುವ ಮೊತ್ತವನ್ನು ಹಣ ಬಿಡುಗಡೆಯಾದ ಪ್ರಧಾನ ಲೆಕ್ಕ ಶೀರ್ಷಿಕೆಯ ಉಪ ಶೀರ್ಷಿಕೆ 911-0-01- Recoveries of over payment of current year ಗೆ ಅಥವಾ 911-0-02- Recoveries of over payment of earlier years ಯಾವುದು ಅನ್ವಯವಾಗುತ್ತದೋ ಆ ಲೆಕ್ಕ ಶೀರ್ಷಿಕೆಗೆ ವರ್ಗಾವಣೆ ಮಾಡುವುದು.

7. ಈ ಪದ್ದತಿಯನ್ನು ಮೊದಲಿಗೆ ರಾಜ್ಯ ಹುಜೂರ್ ಖಜಾನೆ, ಕೆ.ಆರ್. ವೃತ್ತ, ಬೆಂಗಳೂರು ಇಲ್ಲಿ ಸಲ್ಲಿಸಲ್ಪಡುವ ಬಿಲ್ಲುಗಳಿಗೆ ಮಾತ್ರ ಅನ್ವಯಿಸಿ ಜಾರಿಗೆ ತರಲು, ಮಂಜೂರಾತಿ ನೀಡಿದೆ. ಈ ಪದ್ದತಿಯನ್ನು ಖಜಾನೆ-II ಜಾರಿಗೆ ಬಂದ ನಂತರ ಪುನರ್‌ಪರಿಶೀಲಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR-180**

**ಹೆಚ್.ಎ. ಶೋಭ**
ಸರ್ಕಾರದ ಅಧೀನ ಕಾರ್ಯದರ್ಶಿ
(ಆರ್ಥಿಕ ನಿಯಮಗಳು, ಆಯವ್ಯಯ ಸಂಕಲನ ಮತ್ತು ಸಮಿತಿ ಶಾಖೆ)
ಆರ್ಥಿಕ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಭವನ, ನವದೆಹಲಿ ಇಲ್ಲಿನ ನಿವಾಸಿ ಆಯುಕ್ತರ ಕಛೇರಿಯ ಸಹಾಯಕ ನಿವಾಸಿ ಆಯುಕ್ತರ ಹುದ್ದೆಯನ್ನು ತಾತ್ಕಾಲಿಕವಾಗಿ ಉನ್ನತೀಕರಿಸಿ ಶ್ರೀ ಶೈಲೇಂದ್ರಸಿಂಗ್, ಜಂಟಿ ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನೆ, ನಗರ ಯೋಜನಾ ನಿರ್ದೇಶನಾಲಯ ಇವರನ್ನು ಸದರಿ ಉನ್ನತೀಕರಿಸಲಾದ ಹುದ್ದೆಯಲ್ಲಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ:ಆರ್.ಸಿ.ಕೆ.16/ ಎಸ್.ಇ.ಎಸ್./2007-08, ದಿನಾಂಕ: 24-07-2014.

**ಪ್ರಸ್ತಾವನೆ:-**

ಮೇಲೆ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ, ಇವರು ತಮ್ಮ ಕಛೇರಿಯ ಸಹಾಯಕ ನಿವಾಸಿ ಆಯುಕ್ತರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಶೈಲೇಂದ್ರಸಿಂಗ್, ಉಪ ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನೆ, ನಗರ ಯೋಜನಾ ನಿರ್ದೇಶನಾಲಯ, ನಗರಾಭಿವೃದ್ಧಿ ಇಲಾಖೆ ಇವರಿಗೆ ನಗರಾಭಿವೃದ್ಧಿ ಇಲಾಖೆಯ ಅಧಿಸೂಚನೆ ಸಂಖ್ಯೆ:ನಅಇ 46 ನಯೋಸೇ 2014, ದಿನಾಂಕ:02-07-2014 ಮತ್ತು ತಿದ್ದುಪಡಿ ಅಧಿಸೂಚನೆ ದಿನಾಂಕ: 11-07-2014 ಗಳಲ್ಲಿ ಜಂಟಿ ನಿರ್ದೇಶಕರ ಹುದ್ದೆಗ(ವೇತನ ಶ್ರೇಣಿ ರೂ.40,050-56,550) ಸ್ಥಾನಪನ್ನಾ ಮುಂಬಡ್ತಿ ನೀಡಿ ಕಲಬುರಗಿ ಮಹಾನಗರ ಪಾಲಿಕೆಯಲ್ಲಿ ಖಾಲಿ ಇರುವ ನಗರ ಮತ್ತು ಗ್ರಾಮಾಂತರ ಯೋಜನಾ

ಜಂಟಿ ನಿರ್ದೇಶಕರ ಹುದ್ದೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡ ನಂತರ ಸಹಾಯಕ ನಿವಾಸಿ ಆಯುಕ್ತರು, ನಿವಾಸಿ ಆಯುಕ್ತರ ಕಛೇರಿ, ಕರ್ನಾಟಕ ಭವನ, ನವದೆಹಲಿ ಹಾಲಿ ಕಾರ್ಯನಿರ್ವಹಿಸುತ್ತಿರುವ ಸ್ಥಳದಲ್ಲಿ ಮುಂದುವರಿಸಿ ಆದೇಶಿಸಲಾಗಿರುತ್ತದೆ. ಅದರಂತೆ, ಅಧಿಕಾರಿಯವರು ದಿನಾಂಕ: 23–07–2014ರ ಪೂರ್ವಾಹ್ನ ಸಹಾಯಕ ನಿವಾಸಿ ಆಯುಕ್ತರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ ಎಂದು ತಿಳಿಸಿರುತ್ತಾರೆ.

ಮುಂದುವರೆದು, ಶ್ರೀ ಶೈಲೇಂದ್ರಸಿಂಗ್, ಇವರು ನಿವಾಸಿ ಆಯುಕ್ತರ ಕಛೇರಿಯ ಸಹಾಯಕ ನಿವಾಸಿ ಆಯುಕ್ತರ ಹುದ್ದೆಯಲ್ಲಿ ದಿನಾಂಕ: 26–09–2013 ರಿಂದಲೂ ಸಮರ್ಪಕವಾಗಿ ಕರ್ತವ್ಯ ನಿರ್ವಹಿಸಿಕೊಂಡು ಬರುತ್ತಿದ್ದು, ಸದರಿಯವರ ಸೇವೆಯು ಈ ಕಛೇರಿಯಲ್ಲಿ ಅವಶ್ಯವಿರುವುದರಿಂದ ನಿವಾಸಿ ಆಯುಕ್ತರ ಕಛೇರಿಯಲ್ಲಿನ ಸಹಾಯಕ ನಿವಾಸಿ ಆಯುಕ್ತರ ಹುದ್ದೆಯನ್ನು ದಿನಾಂಕ: 23–07–2014ರಿಂದ ಅನ್ವಯವಾಗುವಂತೆ ತಾತ್ಕಾಲಿಕವಾಗಿ ರೂ.40,050–56,550 ವೇತನ ಶ್ರೇಣಿಯಲ್ಲಿ ಉನ್ನತೀಕರಿಸಿ ಆದೇಶಿಸುವಂತೆ ಹಾಗೂ ಸದರಿ ಅಧಿಕಾರಿಯವರನ್ನು ಅದೇ ಹುದ್ದೆಯಲ್ಲಿ ಮುಂದುವರಿಸುವ ಸಂಬಂಧ ಆದೇಶ ಹೊರಡಿಸಲು ಕ್ರಮವಹಿಸುವಂತೆ ಕೋರಿರುತ್ತಾರೆ.

ನಿವಾಸಿ ಆಯುಕ್ತರು, ಕರ್ನಾಟಕ ಭವನ ಇವರು ನೀಡಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಶೈಲೇಂದ್ರಸಿಂಗ್ ಇವರು ಸಹಾಯಕ ನಿವಾಸಿ ಆಯುಕ್ತರು, ನಿವಾಸಿ ಆಯುಕ್ತರ ಕಛೇರಿ, ಕರ್ನಾಟಕ ಭವನ, ನವದೆಹಲಿ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕ: 23–07–2014 ರಿಂದ ಅನ್ವಯವಾಗುವಂತೆ ಸಹಾಯಕ ನಿವಾಸಿ ಆಯುಕ್ತರ ಹುದ್ದೆಯನ್ನು ತಾತ್ಕಾಲಿಕವಾಗಿ ರೂ.40,050–56,550 ವೇತನ ಶ್ರೇಣಿಯ ಹುದ್ದೆಯನ್ನಾಗಿ ಉನ್ನತೀಕರಿಸಲು ಹಾಗೂ ಸದರಿ ಉನ್ನತೀಕರಿಸಲಾದ ಹುದ್ದೆಯಲ್ಲಿ ಶ್ರೀ ಶೈಲೇಂದ್ರಸಿಂಗ್, ಜಂಟಿ ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನೆ, ನಗರ ಯೋಜನಾ ನಿರ್ದೇಶನಾಲಯ ಇವರನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 280 ಸಲುಸೇ 2014 ಬೆಂಗಳೂರು, ದಿನಾಂಕ: 10ನೇ ಮಾರ್ಚ್, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಶೈಲೇಂದ್ರಸಿಂಗ್, ಜಂಟಿ ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನೆ, ನಗರ ಯೋಜನಾ ನಿರ್ದೇಶನಾಲಯ ಇವರು ಕರ್ನಾಟಕ ಭವನ, ನವದೆಹಲಿ, ಇಲ್ಲಿನ ನಿವಾಸಿ ಆಯುಕ್ತರ ಕಛೇರಿಯ ಸಹಾಯಕ ನಿವಾಸಿ ಆಯುಕ್ತರ ಹುದ್ದೆಯಲ್ಲಿ ಮುಂಬಡ್ತಿ ಹೊಂದಿ ಕರ್ತವ್ಯಕ್ಕೆ ಹಾಜರಾದ ದಿನಾಂಕ: 23–07–2014 ರಿಂದ ಅನ್ವಯವಾಗುವಂತೆ ಸಹಾಯಕ ನಿವಾಸಿ ಆಯುಕ್ತರ ಹುದ್ದಯನ್ನು ತಾತ್ಕಾಲಿಕವಾಗಿ ರೂ.40,050–56,550 ವೇತನ ಶ್ರೇಣಿಯ ಹುದ್ದೆಯನ್ನಾಗಿ ಉನ್ನತೀಕರಿಸಿ ಸದರಿ ಉನ್ನತೀಕರಿಸಲಾದ ಹುದ್ದೆಯಲ್ಲಿ ಮುಂದುವರಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 140 ಸೇ–3/15 ದಿನಾಂಕ: 07–03–2015 ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಾ|| ಗೀತಾ.ಎಲ್.**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**PR-216**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಆರ್. ಶ್ರೀನಿವಾಸ ರಾಜು, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಎ.ಸಿ.ಜೆ.ಎಂ. ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ರವರ ವಿರುದ್ಧ ದಾಖಲಾದ ಲಂಚ ಪ್ರಕರಣ – ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ:** ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಪತ್ರ ಸಂಖ್ಯೆ: ಲೋಕ್/ಐಎನ್ ವಿ(ಜಿ)/ಸಿಟಿ ಕ್ರೈಂ. 4/2015. ದಿನಾಂಕ: 29–01–2015

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರದಲ್ಲಿ ತಿಳಿಸಲಾಗಿರುವಂತೆ ಶ್ರೀ ವಿ.ಸುಬ್ರಮಣಿ, ತೂಬರಹಳ್ಳಿ, ವೈಟ್ ಫೀಲ್ಡ್ ಅಂಚೆ, ಬೆಂಗಳೂರು ಇವರು ತಮ್ಮ ಸೋದರಮಾವರವರು ವರ್ತೂರು ಪೊಲೀಸ್ ಠಾಣೆಯಲ್ಲಿ ತಮ್ಮ ಜಮೀನಿನ ಮಾಲೀಕತ್ವಕ್ಕೆ ಸಂಬಂಧಪಟ್ಟಂತೆ ಆರೋಪಿಗಳ ವಿರುದ್ಧ ಸಲ್ಲಿಸಿರುವ ದೂರಿನ ತನಿಖೆಯು ಪೂರ್ಣಗೊಂಡಿದ್ದು, ಸದರಿ ಪ್ರಕರಣದಲ್ಲಿ ಆರೋಪಿತರುಗಳ ವಿರುದ್ಧದ ಆರೋಪಗಳು ಸಾಬೀತಾಗಿದ್ದು, ಅದರಂತೆ ಸಕ್ಷಮ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಪರಿಶೀಲಿಸಿ ಸಲ್ಲಿಸುವ ಪ್ರಕ್ರಿಯೆಗೆ ಶ್ರೀ ಆರ್.ಶ್ರೀನಿವಾಸ ರಾಜು, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಎ.ಸಿ.ಜೆ.ಎಂ. ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರು ರೂ.50,000/–ಗಳ ಲಂಚದ ಹಣಕ್ಕಾಗಿ ಒತ್ತಾಯಿಸಿ, ಈ ಪೈಕಿ ರೂ.20,000/–ಗಳನ್ನು ಈಗಾಗಲೇ ಪಡೆದುಕೊಂಡಿದ್ದು, ಬಾಕಿ ಮೊತ್ತದ ಪೈಕಿ ರೂ.10,000/–ಗಳ ಲಂಚದ ಹಣಕ್ಕಾಗಿ ಒತ್ತಾಯಿಸಿರುತ್ತಾರೆನ್ನುವ ದೂರಿನನ್ವಯ, ದಿನಾಂಕ: 24–01–2015ರಂದು ಬೆಂಗಳೂರು ನಗರ ಲೋಕಾಯುಕ್ತ. ಪೊಲೀಸ್ ಠಾಣಾ ಮೊ.ನಂ. 4/2015ರಲ್ಲಿ ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ–1988ರ ಕಲಂ 7, 13(1)(ಡಿ) ಸಹವಾಚನ 13(2)ಗಳನ್ವಯ ಪ್ರಕರಣ ದಾಖಲು ಮಾಡಿ ತನಿಖೆ ಕೈಗೊಂಡಿರುತ್ತಾರೆ. ಸದರಿ ದಿನದಂದು ಶ್ರೀ ಆರ್.ಶ್ರೀನಿವಾಸ್ ರಾಜು, ಹಿ.ಸ.ಸ.ಅಭಿಯೋಜಕರು, ಎ.ಸಿ.ಜೆ.ಎಂ. ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಇವರು ಫಿರ್ಯಾಧಿಯಿಂದ ಲಂಚದ ಹಣ ರೂ.10,000/–ಗಳನ್ನು ತಮ್ಮ ಕಛೇರಿ ಕೊಠಡಿಯಲ್ಲಿ ಪಡೆಯುತ್ತಿದ್ದಾಗ ಬೆಂಗಳೂರು ನಗರ ಲೋಕಾಯುಕ್ತ ಪೊಲೀಸರ ಬಲೆಗೆ ನೇರವಾಗಿ ಸಿಕ್ಕಿಬಿದ್ದಿದ್ದು, ದೊರೆತಿರುವ ಸಾಕ್ಷಾಧಾರಗಳಿಂದ ಸಾಬೀತಾಗಿರುವುದರಿಂದ, ಆರೋಪಿತರು ತಮ್ಮ ಸ್ಥಾನದಲ್ಲಿಯೇ ಮುಂದುವರೆದರೆ ತನಿಖೆಯ ಹಾದಿ ತಪ್ಪಿಸಿ ಸಾಕ್ಷಾಧಾರಗಳನ್ನು ನಾಶಪಡಿಸುವ ಅವಕಾಶವಿರುವುದರಿಂದ, ನ್ಯಾಯಾಂಗ ಬಂಧನಕ್ಕೆ ಒಳಪಡಿಸಿದ ದಿನಾಂಕದಿಂದಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಲೀನನ್ನು ಬೇರೆ ಕಡೆಗೆ ವರ್ಗಾಯಿಸಲು ಅಪರ "ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಮಾಡಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 43 ಪಿಪಿಇ 2015, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2015**

ಶ್ರೀ ಆರ್. ಶ್ರೀನಿವಾಸ ರಾಜು, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಎ.ಸಿ.ಜೆ.ಎಂ. ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರನ್ನು ಭ್ರಷ್ಟಾಚಾರದ ಆರೋಪದಡಿಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು–

1957ರ ನಿಯಮ 10(1)(ಎ)ರ ಅನುಸಾರ ಲೋಕಾಯುಕ್ತ ವಿಚಾರಣೆಯನ್ನು ಬಾಕಿಯಿರಿಸಿ, ದಿನಾಂಕ: 24–01–2015ರಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಯುಕ್ತ ಪ್ರಾಧಿಕಾರದ ಅನುಮತಿ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡಬಾರದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

PR-215

**ಜೆ.ಡಿ. ಮಧುಚಂದ್ರ ತೇಜಸ್ವಿ**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು–ಬಿ)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ತೆರೆಯಲಾಗಿರುವ ಹೊಸ ಪಶುಚಿಕಿತ್ಸಾಲಯಗಳಿಗೆ ಸ್ಥಳ ಗುರುತಿಸುವುದು ಹಾಗೂ ಮೇಲ್ದರ್ಜೆಗೇರಿಸಲಾಗಿರುವ ಪಶು ಚಿಕಿತ್ಸಾಲಯಗಳಿಗೆ ಸಂಸ್ಥೆಗಳನ್ನು ಗುರುತಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ದಿನಾಂಕ: 24–12–2014.

2) ಸರ್ಕಾರಿ, ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ದಿನಾಂಕ: 04–02–2015.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ರಾಜ್ಯಾದ್ಯಂತ 100 ಹೊಸ ಪಶುಚಿಕಿತ್ಸಾಲಯಗಳನ್ನು ತೆರೆಯಲು ಹಾಗೂ 100 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014 ದಿನಾಂಕ: 24–12–2014 ರನ್ವಯ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ರಾಜ್ಯಾದ್ಯಾದಂತ 100 ಹೊಸ ಪಶುಚಿಕಿತ್ಸಾಲಯಗಳನ್ನು ತೆರೆಯಲು ಹಾಗೂ 100 ಪ್ರಾಥಮಿಕ ಪಶು ಚಿಕಿತ್ಸಾಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಮಂಜೂರಾತಿ ನೀಡಲಾಗಿದ್ದು, ಸದರಿ ಆದೇಶದನ್ವಯ ಹೊಸದಾಗಿ ತೆರೆಯಲಾಗಿರುವ 75 ಪಶುಚಿಕಿತ್ಸಾಲಯಗಳಿಗೆ ಸ್ಥಳಗಳನ್ನು ಗುರುತಿಸಲಾಗಿದೆ. ಹಾಗೂ ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸುವ 69 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಗುರುತಿಸಿ ಆದೇಶಿಸಲಾಗಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 2014–15 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014 ದಿನಾಂಕ: 24–12–2014 ರನ್ವಯ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ರಾಜ್ಯಾದ್ಯಂತ ತೆರೆಯಲಾಗುವ ಹೊಸ ಪಶುಚಿಕಿತ್ಸಾಲಯಗಳಿಗೆ ಮುಂದುವರೆದು ಸ್ಥಳಗಳನ್ನು ಗುರುತಿಸಲು ಹಾಗೂ ಮೇಲ್ದರ್ಜೆಗೇರಿಸಲಾಗಿರುವ ಪಶುಚಿಕಿತ್ಸಾಲಯಗಳಿಗೆ ಮುಂದುವರೆದು ಸಂಸ್ಥೆಗಳನ್ನು ಗುರುತಿಸಲು ತೀರ್ಮಾನಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ಬೆಂಗಳೂರು ದಿನಾಂಕ: 09–03–2015**

ಮೇಲ್ಕಂಡ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014 ದಿನಾಂಕ: 24–12–2014 ರನ್ವಯ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ರಾಜ್ಯಾದ್ಯಂತ 100 ಹೊಸ ಪಶುಚಿಕಿತ್ಸಾಲಯಗಳನ್ನು ತೆರೆಯಲು ಹಾಗೂ 100 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಮಂಜೂರಾತಿ ನೀಡಲಾಗಿದ್ದು, ಸದರಿ ಆದೇಶದನ್ವಯ ಹೊಸದಾಗಿ ತೆರೆಯಲಾಗುವ 07 ಪಶುಚಿಕಿತ್ಸಾಲಯಗಳಿಗೆ ಇದರೊಂದಿಗೆ ಲಗತ್ತಿಸಿರುವ ಅನುಬಂಧ–1 ರಲ್ಲಿರುವಂತೆ ಸ್ಥಳಗಳನ್ನು ಗುರುತಿಸಲಾಗಿದೆ ಹಾಗೂ ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಿರುವ 09 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಅನುಬಂಧ–2 ರಲ್ಲಿರುವಂತೆ ಗುರುತಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಪ್ರಸನ್ನ**

ಪೀಠಾಧಿಕಾರಿ – 2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,

(ಪಶುಸಂಗೋಪನೆ–ಎ)

**ಸರ್ಕಾರಿ ಆದೇಶ ಸಂಖ್ಯೆ:ಪಸಂಮೀ 73 ಪಸಸೇ 2014, ಬೆಂಗಳೂರು**

**ದಿನಾಂಕ: 09–03–2015 ಕ್ಕೆ ಅನುಬಂಧ –1**

**ಹೊಸದಾಗಿ ಪಶುಚಿಕಿತ್ಸಾಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಿರುವ ಗ್ರಾಮಗಳ ಪಟ್ಟಿ**

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೊಸದಾಗಿ ಪಶು ಚಿಕಿತ್ಸಾಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡುವ ಗ್ರಾಮಗಳ ಹೆಸರು |
|---|---|---|---|
| 1. | ದಕ್ಷಿಣ ಕನ್ನಡ ಜಿಲ್ಲೆ | ಬೆಳ್ತಂಗಡಿ | ಬಾರ್ಯ |
| 2. | ದಾವಣಗೆರೆ | ದಾವಣಗೆರೆ | ದೊಡ್ಡರಂಗವನ ಹಳ್ಳಿ |

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೊಸದಾಗಿ ಪಶು ಚಿಕಿತ್ಸಾಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡುವ ಗ್ರಾಮಗಳ ಹೆಸರು |
|---|---|---|---|
| 3. | ಕಲಬುರಗಿ | ಚಿಂಚೋಳಿ | ಚಿಂಚೋಳಿ ಹೆಚ್ |
| 4. | ಹಾಸನ | ಹಾಸನ | ಸೋಮನಹಳ್ಳಿ |
| 5. | ಹಾಸನ | ಸಿಆರ್‌ಪಟ್ಟಣ | ಆಯರಳ್ಳಿ |
| 6. | ಚಿತ್ರದುರ್ಗ | ಹೊಳಲ್ಕೇರೆ | ತಾಳಿಕಟ್ಟೆ |
| 7. | ಚಿತ್ರದುರ್ಗ | ಹೊಳಲ್ಕೇರೆ | ತುಪ್ಪದ ಹಳ್ಳಿ |

**ಸರ್ಕಾರಿ ಆದೇಶ ಸಂಖ್ಯೆ:ಪಸಂಮೀ 73 ಪಸಸೇ 2014, ಬೆಂಗಳೂರು**

**ದಿನಾಂಕ: 09–03–2015 ಕ್ಕೆ ಅನುಬಂಧ –2**

**ಪ್ರಾಥಮಿಕ ಪಶು ಚಿಕಿತ್ಸಾ ಕೇಂದ್ರಗಳು/ ಕೃ.ಗ.ಉ.ಕೇಂ ಗಳನ್ನು ಪಶು ಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸುವ ಸ್ಥಳಗಳು**

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಪ್ರಾಥಮಿಕ ಪಶುಚಿಕಿತ್ಸಾಲಯಗಳನ್ನು ಮೇಲ್ದರ್ಜೆಗೇರಿಸಬೇಕಾದ ಸಂಸ್ಥೆಯ ಹೆಸರು |
|---|---|---|---|
| 1. | ಬೆಂಗಳೂರು ಗ್ರಾಮಾಂತರ | ದೇವನಹಳ್ಳಿ | ಬೈರಾಪುರ |
| 2. | ದಕ್ಷಿಣ ಕನ್ನಡ ಜಿಲ್ಲೆ | ಬೆಳ್ತಂಗಡಿ | ಮಡಂತ್ಯಾರು |
| 3. | ದಾವಣಗೆರೆ | ದಾವಣಗೆರೆ | ದೊಡ್ಡಭಾರತಿ |
| 4. | ಹಾಸನ | ಬೇಲೂರು | ಹಡಗೂರು |
| 5. | ಹಾಸನ | ಹಾಸನ | ಹೂವಿನ ಹಳ್ಳಿ ಕಾವಲು |
| 6. | ಚಿತ್ರದುರ್ಗ | ಚಳ್ಳಕೆರೆ | ಪ್ರಾಪಚಿ, ಪುರ್ಲೇಹಳ್ಳಿ |
| 7. | ಚಿತ್ರದುರ್ಗ | ಹಿರಿಯೂರು | ಪ್ರಾಪಚಿ, ಧರ್ಮಪುರ |
| 8. | ತುಮಕೂರು | ಚಿಕ್ಕನಾಯಕನ ಹಳ್ಳಿ | ಪ್ರಾಪಚಿ, ತೀರ್ಥಪುರು |
| 9. | ಬೆಳಗಾವಿ | ಸೌದತ್ತಿ | ಪ್ರಾಪಚಿ, ಉಗ್ರಗೋಳ |

**ಹೆಚ್. ಪ್ರಸನ್ನ**
ಪೀಠಾಧಿಕಾರಿ – 2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ)

**PR-222**
**SC-100**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 557 ಎಲ್‌ಎಸ್‌ಐ 2014 ಬೆಂಗಳೂರು, ದಿನಾಂಕ: 31–01–2015**

ಡಾ: ಅರುಣ್‌ಕುಮಾರ್ ವಿ.ಎಂ. ವಿಮಾ ವೈದ್ಯಾಧಿಕಾರಿ, ಕಾರ್ಮಿಕರ ರಾಜ್ಯ ವಿಮಾ ಚಿಕಿತ್ಸಾಲಯ, ಯಶವಂತಪುರ, ಬೆಂಗಳೂರು ಇವರು Indian Audits & Accounts Service ಸೇವೆಗೆ ಆಯ್ಕೆಯಾಗಿರುವುದರಿಂದ, ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯ ಸೇವೆಯಿಂದ ಬಿಡುಗಡೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ವಿ. ನಾಗೇಶ ರಾವ್**
**ಪೀಠಾಧಿಕಾರಿ,**
**ಕಾರ್ಮಿಕ ಇಲಾಖೆ.**
**(ಕಾರಾವಿ ಯೋ ವೈ. ಸೇವೆಗಳು)**

**PR-145**
**SC-50**

## ಕೃಷಿ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಕೃಇ 22 ಕೃವಿವಿ 2014 ಬೆಂಗಳೂರು, ದಿನಾಂಕ: 23–01–2015.**

**ವಿಷಯ :** ಕೃಷಿಯಲ್ಲಿ ಡಿಪ್ಲೊಮಾ ಬಿ.ಎಸ್ಸಿ (ಕೃಷಿ) ಹಾಗೂ ತತ್ಸಮಾನ ಪದವಿಗಳಲ್ಲಿನ ಪ್ರವೇಶದಲ್ಲಿನ ರೈತರ ಹಾಗೂ ಕೃಷಿ ಕಾರ್ಮಿಕರ ಮಕ್ಕಳಿಗೆ ಶೇ. 40 ರಷ್ಟು ಸೀಟುಗಳನ್ನು ಮೀಸಲಿಡುವ ಬಗ್ಗೆ.

ಕೃಷಿಯಲ್ಲಿ ಡಿಪ್ಲೊಮಾ ಬಿ.ಎಸ್ಸಿ (ಕೃಷಿ) ಹಾಗೂ ತತ್ಸಮಾನ ಪದವಿಗಳಲ್ಲಿನ ಪ್ರವೇಶದಲ್ಲಿನ ರೈತರ ಹಾಗೂ ಕೃಷಿ ಕಾರ್ಮಿಕರ ಮಕ್ಕಳಿಗೆ ಶೇ. 40 ರಷ್ಟು ಸೀಟುಗಳನ್ನು ಮೀಸಲಿರುವುದಕ್ಕೆ ಸಂಬಂಧಿಸಿದಂತೆ ಸರ್ಕಾರದ ಸಮ ಸಂಖ್ಯೆಯ ದಿನಾಂಕ: 21–08–2014ರ ಸರ್ಕಾರಿ ಆದೇಶದ 5ನೇ ಕಂಡಿಕೆಯ 5 ಹಾಗೂ 6ನೇ ಸಾಲಿನಲ್ಲಿ **"ಗ್ರಾಮೀಣ ಪ್ರದೇಶದಲ್ಲಿ ಎಸ್.ಎಸ್.ಎಲ್.ಸಿ.ಯಲ್ಲಿ ಯಾರು ಉತ್ತೀರ್ಣರಾಗಿರುತ್ತಾರೋ"** ಎಂಬ ಪದಗಳಿಗೆ ಬದಲಾಗಿ **"ಗ್ರಾಮೀಣ ಪ್ರದೇಶದಲ್ಲಿ ಒಂದರಿಂದ ಹತ್ತನೇ ತರಗತಿಯವರಿಗೆ ವ್ಯಾಸಂಗ ಮಾಡಿರುವ ವಿದ್ಯಾರ್ಥಿಗಳಿಗೆ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಆರ್.ಬಸವರಾಜಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕೃಷಿ ಇಲಾಖೆ,
(ಸೇವೆಗಳು ಮತ್ತು ಸಮನ್ವಯ)

**PR-144**
**SC-25**

## ಒಳಾಡಳಿತ ಸಚಿವಾಲಯ

**ವಿಷಯ :** ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಅಧಿಸೂಚನೆ ಸಂಖ್ಯೆ:ಹೆಚ್‌ಡಿ 4 ಪಿಸಿಇ 2012 ದಿನಾಂಕ: 09–03–2012
2) ಅಧಿಸೂಚನೆ ಸಂಖ್ಯೆ:ಹೆಚ್‌ಡಿ 4 ಪಿಸಿಇ 2012 ದಿನಾಂಕ: 30–12–2014
3) ಕಾರ್ಯದರ್ಶಿ, ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗರವರ ಪತ್ರ ಸಂಖ್ಯೆ:ಆರ್‌ಜಿವಿಸಿ/223/2014, ದಿನಾಂಕ: 06–01–2015.

**ಪ್ರಸ್ತಾವನೆ:**

ದಿನಾಂಕ: 02–03–2012ರಂದು ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸರ ನಡುವೆ ನಡೆದ ಘರ್ಷಣೆಯ ಕುರಿತು ಸತ್ಯಾ ಸತ್ಯತೆಯನ್ನು ತಿಳಿದುಕೊಳ್ಳಲು ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ, ನಿವೃತ್ತ ನ್ಯಾಯಾಧೀಶರು ಇವರ ನೇತೃತ್ವದಲ್ಲಿ ಏಕ ಸದಸ್ಯ ವಿಚಾರಣಾ ಆಯೋಗವನ್ನು ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ರಚಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗದ ಅವಧಿಯನ್ನು ದಿನಾಂಕ:31–01–2015 ರವರೆಗೆ ವಿಸ್ತರಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ನ್ಯಾಯಮೂರ್ತಿ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗ ಅವರು ರೂ.15,00,000/–ಗಳ ಅನುದಾನ ಮಂಜೂರು ಮಾಡಲು ಕೋರಿದ್ದು, ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 4 ಪಿಸಿಇ 2012 ಬೆಂಗಳೂರು ದಿನಾಂಕ: 12–01–2015**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ, ವಿಚಾರಣಾ ಆಯೋಗದ ಅಧ್ಯಕ್ಷರಿಗೆ, ಕಾರ್ಯದರ್ಶಿಯವರಿಗೆ ಹಾಗೂ ಸಿಬ್ಬಂದಿಯ ವೇತನ ವೆಚ್ಚ ಭರಿಸಲು ಹಾಗೂ ವಕೀಲರಿಗೆ ಹಣ ಪಾವತಿಸಲು ಆಯೋಗದ ಖರ್ಚು–ವೆಚ್ಚಗಳಿಗೆ ಅನುಕೂಲವಾಗುವಂತೆ **₹. 10,00,000/– (ರೂಪಾಯಿ ಹತ್ತು ಲಕ್ಷಗಳು ಮಾತ್ರ)**ಗಳನ್ನು ಲೆಕ್ಕ ಶೀರ್ಷಿಕೆ **"2070–00–105–0–02–059 ಇತರ ವಿಚಾರಣಾ ಆಯೋಗ"** ಅಡಿಯಲ್ಲಿ ಭರಿಸುವಂತೆ ಹಣವನ್ನು ಸರ್ಕಾರವು ಮಂಜೂರು ಮಾಡಿದೆ.

ಆಯೋಗದ ಕಾರ್ಯದರ್ಶಿಯವರು ಹಣವನ್ನು ಹಿಂತೆಗೆಯುವ ಮತ್ತು ವಿತರಿಸುವ ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುವರು.

ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 3 ಟಿಎಫ್‌ಪಿ 2014, ದಿನಾಂಕ: 04–04–2014ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳಿಗೆ ಅಧಿಕಾರದನ್ವಯ ಪ್ರತ್ಯಾಯೋಜಿಸಿ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಗೋವಿಂದಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಕಾನೂನು ಮತ್ತು ಸುವ್ಯವಸ್ಥೆ)

**PR-151**
**SC-25**

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಪಸಂಮೀ 76 ಪಸಸೇ 2013 ಬೆಂಗಳೂರು, ದಿನಾಂಕ: 05–02–2015**

ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 76 ಪಸಸೇ 2013, ದಿನಾಂಕ: 14–05–2013 ರಲ್ಲಿನ ಕ್ರಮ ಸಂಖ್ಯೆ: 751 ರಲ್ಲಿನ ಡಾ:ರವಿಕುಮಾರ್ ಕೆ.ಎನ್., ಕ್ರಮ ಸಂಖ್ಯೆ: 965 ರಲ್ಲಿನ ಡಾ:ಹೆಚ್.ಕೆ.ಶಿವಪ್ರಕಾಶ್ ಹಾಗೂ ಕ್ರಮ ಸಂಖ್ಯೆ: 632 ರಲ್ಲಿನ ಡಾ:ಶಶಿಧರ ಎಂ.ಎಸ್., ಇವರುಗಳ ಹೆಸರನ್ನು ಕ್ರಮವಾಗಿ ಡಾ:ರವಿಕುಮಾರ್ ಕೆ., ಡಾ:ಶಿವಪ್ರಕಾಶ್ ಹೆಚ್.ಎಂ., ಹಾಗೂ ಡಾ:ಶಶಿಧರ ಬಿ.ಕೆ., ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಪ್ರಸನ್ನ**
ಪೀಠಾಧಿಕಾರಿ–2
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ)

**PR-153**
**SC-100**

**ಕಾನೂನು ಸಚಿವಾಲಯ**

**ವಿಷಯ :** ಮೈಸೂರು ಜಿಲ್ಲೆಯ ಹುಣಸೂರು ಕಂದಾಯ ತಾಲ್ಲೂಕಿನಲ್ಲಿ ಖಾಲಿಯಿರುವ ನೋಟರಿ ಹುದ್ದೆಯನ್ನು ತುಂಬುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಸಮ ಸಂಖ್ಯೆಯ ಪತ್ರದ ದಿನಾಂಕ 22–02–2014.
2) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಮೈಸೂರು ಇವರ ಪತ್ರ ಸಂಖ್ಯೆ : ಸಿಆರ್‌ಆರ್/ನೋಟರಿ/770/2014, ದಿನಾಂಕ 06–06–2014.
3) ಸರ್ಕಾರದ ಸಮ ಸಂಖ್ಯೆಯ ಪತ್ರದ ದಿನಾಂಕ 07–07–2014.
4) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಮೈಸೂರು ಇವರ ಪತ್ರ ಸಂಖ್ಯೆ : ಸಿಆರ್‌ಆರ್/ನೋಟರಿ/18508/2014, ದಿನಾಂಕ 12–12–2014.
5) ಸರ್ಕಾರಿ ಅಧಿಸೂಚನೆ ಸಂಖ್ಯೆ : ಲಾ 61 ಎಲ್‌ಸಿಎಲ್ 2009, ದಿನಾಂಕ 14–07–2010
6) ಸರ್ಕಾರದ ಸಮ ಸಂಖ್ಯೆಯ ಸಂದರ್ಶನ ಸೂಚನಾ ಪತ್ರದ ದಿನಾಂಕ 31–01–2014.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಸಮ ಸಂಖ್ಯೆಯ ಪತ್ರದಲ್ಲಿ ಮೈಸೂರು ಜಿಲ್ಲೆಯ ಹುಣಸೂರು ಕಂದಾಯ ತಾಲ್ಲೂಕಿನ ಶ್ರೀ ಹೆಚ್. ಸಣ್ಣಪ್ಪ ನೋಟರಿ ಇವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಕುರಿತಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಅಭಿಪ್ರಾಯ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ನೀಡಿರುವ ವರದಿಯಂತೆ ಮೈಸೂರು ಜಿಲ್ಲೆಯ ಹುಣಸೂರು ಕಂದಾಯ ತಾಲ್ಲೂಕಿನಲ್ಲಿ ಸುಮಾರು 3000 ಮತದಾರರಿದ್ದು ಶ್ರೀ ಹೆಚ್. ಸಣ್ಣಪ್ಪ, ನೋಟರಿ ಹುಣಸೂರು ಕಂದಾಯ ತಾಲ್ಲೂಕು ಇವರ ನಿಧನದಿಂದ ತೆರವಾದ ನೋಟರಿ ಹುದ್ದೆಯನ್ನು ತುಂಬುವುದು ಅವಶ್ಯಕತೆಯಿದೆಯೆಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಹುಣಸೂರು ಕಂದಾಯ ತಾಲ್ಲೂಕು (ಮೈಸೂರು ಜಿಲ್ಲೆ) ಇಲ್ಲಿ ಖಾಲಿಯಿರುವ ನೋಟರಿ ಹುದ್ದೆಯನ್ನು ತುಂಬುವ ಕುರಿತಂತೆ ನೋಟರಿಗಳ ಅಧಿನಿಯಮ/ನಿಯಮಗಳು ನಿಯಮ 1956 ನಿಯಮ 6(1)(2) ಮತ್ತು 7(1)(2)(3) ರನ್ವಯ ತಿದ್ದುಪಡಿ ನಿಯಮಗಳನ್ವಯ ಅಧಿಸೂಚನೆ ಹೊರಡಿಸಿ ಸ್ಥಳೀಯ ಜಾಹೀರಾತು ನೀಡಿ ಆ ಮೂಲಕ ಸ್ವೀಕರಿಸುವ ಅರ್ಜಿಗಳನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳ 1977ರ ನಿಯಮ 12 ರನ್ವಯ ಪರಿಶೀಲಿಸಿ ಅವರ ಅಭಿಪ್ರಾಯದೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಕೋರಲಾಗಿತ್ತು. ಆ ಮೇರೆಗೆ ಕ್ರಮ ಸಂಖ್ಯೆ (4)ರ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪತ್ರದಲ್ಲಿ 4 ವಕೀಲರುಗಳ ಮೆಮೋರಿಯಲಗಳನ್ನು ಅವರ ಅಭಿಪ್ರಾಯದೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಸರ್ಕಾರಿ ಅಧಿಸೂಚನೆಯಲ್ಲಿ ಕೇಂದ್ರ ಅಧಿನಿಯಮದ section 15 ರಲ್ಲಿ (1951 ಅಧಿನಿಯಮ 53) ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು ಹಾಗೂ 2009ರ ನೋಟರಿಗಳ (ತಿದ್ದುಪಡಿ) ನಿಯಮಗಳ ನಿಯಮ 7 (a)2 ರನ್ವಯ ನೋಟರಿ ಹುದ್ದೆಯ ನೇಮಕಾತಿ ಆಯ್ಕೆಗೆ ಸಂದರ್ಶನ ಮಂಡಳಿಯನ್ನು ರಚಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಸ್ತಾವನೆಯಲ್ಲಿ ಶಿಫಾರಸ್ಸು ಮಾಡಿರುವ ಎಲ್ಲಾ ವಕೀಲರುಗಳನ್ನು ಸಂದರ್ಶನಕ್ಕೆ ಆಹ್ವಾನಿಸಿ ದಿನಾಂಕ 20–02–2015 ರಂದು ನಡೆದ ಸಂದರ್ಶನ ಮಂಡಳಿಯಲ್ಲಿ ಶ್ರೀ ವಿ.ಜಿ. ಮುರಳೀಧರ, ವಕೀಲರು, ಇವರನ್ನು ಹುಣಸೂರು ಕಂದಾಯ ತಾಲ್ಲೂಕಿನಲ್ಲಿ ಖಾಲಿಯಿರುವ ನೋಟರಿ ಹುದ್ದೆಗೆ ನೇಮಕ ಮಾಡಲು ಶಿಫಾರಸ್ಸು ಮಾಡಲಾಗಿದೆ.

ಆಮೇರೆಗೆ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 02 ಎಲ್‌ಸಿಎಲ್ 2013, ಬೆಂಗಳೂರು, ದಿನಾಂಕ: 24ನೇ ಮಾರ್ಚ್, 2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿ ನೋಟರಿ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1) ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಶ್ರೀ ವಿ.ಜಿ. ಮುರಳೀಧರ, ವಕೀಲರು, ಮನೆ ನಂ. 166, ವಾರ್ಡ್ ನಂ. 10, ಓಲ್ಡ ಪೋಸ್ಟ್ ಆಫೀಸ್ ರೋಡ್, ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ–571105, ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ 5 (ಐದು) ವರ್ಷಗಳ ಅವಧಿಗೆ ಹುಣಸೂರು ಕಂದಾಯ ತಾಲ್ಲೂಕಿನಲ್ಲಿ ಶ್ರೀ ಹಚ್. ಸಣ್ಣಪ್ಪ, ನೋಟರಿ ಇವರ ನಿಧನದಿಂದ ತೆರವಾಗಿರುವ ಖಾಲಿ ಹುದ್ದೆಗೆ ನೇಮಕಾತಿ ಮಾಡಲಾಗಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070– ಇತರೆ ಆಡಳಿತಾತ್ಮಕ ಸೇವೆಗಳು –01–ನ್ಯಾಯ ಪರಿಪಾಲನೆ – 501–0– ಇತರೆ ಸ್ವೀಕೃತಿಗಳು –06– ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ. 1000.00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರವನ್ನು ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952 ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ನೋಟರಿ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಯಿದಾ ಬಾನು**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-2)

**P.R. 253**

**SC - 25**

## ಕೃಷಿ ಸಚಿವಾಲಯ

**ವಿಷಯ :** ಕೃಷಿಯಲ್ಲಿ ಡಿಪ್ಲೊಮಾ, ಬಿ.ಎಸ್ಸಿ (ಕೃಷಿ) ಹಾಗೂ ತತ್ಸಮಾನ ಪದವಿಗಳಲ್ಲಿನ ಪ್ರವೇಶದಲ್ಲಿ ರೈತರ ಹಾಗೂ ಕೃಷಿ ಕಾರ್ಮಿಕರ ಮಕ್ಕಳಿಗೆ ಶೇ. 40 ರಷ್ಟು ಸೀಟುಗಳನ್ನು ಮೀಸಲಿಡುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ : ಎಹೆಚ್‌ಡಿ 63 ಎಯುಎಂ 2003, ದಿನಾಂಕ 10-07-2003.
2) ದಿನಾಂಕ 05-07-2014ರ ಸರ್ಕಾರಿ ಆದೇಶ ಸಂಖ್ಯೆ : ಕೃಇ 22 ಕೃವಿವಿ 2014.
3) ಸಮಸಂಖ್ಯೆಯ ದಿನಾಂಕ 21-08-2014ರ ಸರ್ಕಾರಿ ಆದೇಶ.
4) ಸಮಸಂಖ್ಯೆಯ ದಿನಾಂಕ 23-01-2015ರ ತಿದ್ದುಪಡಿ ಆದೇಶ.
5) ದಿನಾಂಕ 11-02-2015 ರಂದು ಮಾನ್ಯ ಕೃಷಿ ರಾಜ್ಯ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಕೃವಿವಿಗಳ ಸಮನ್ವಯ ಸಮಿತಿಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ 10-07-2003ರ ಆದೇಶದಲ್ಲಿ ರಾಜ್ಯದ ಕೃಷಿ ವಿಶ್ವವಿದ್ಯಾಲಯಗಳಲ್ಲಿ ಬಿ.ಎಸ್ಸಿ (ಕೃಷಿ) ಹಾಗೂ ತತ್ಸಮಾನ ಪದವಿಗಳ ಪ್ರವೇಶದಲ್ಲಿ ಕೃಷಿಕರ ಅಥವಾ ಅವರ ಮಕ್ಕಳಿಗಾಗಿ ಶೇ. 23.8 ರಷ್ಟು ಮೀಸಲಾತಿಯನ್ನು ನಿಗದಿಪಡಿಸಲಾಗಿತ್ತು.

2. ಮಾನ್ಯ ಮುಖ್ಯ ಮಂತ್ರಿಯವರು ದಿನಾಂಕ 14-02-2014 ರಂದು ವಿಧಾನಮಂಡಲದಲ್ಲಿ ಮಂಡಿಸಿದ ಆಯವ್ಯಯದಲ್ಲಿ (ಆಯವ್ಯಯ ಭಾಷಣದ ಕಂಡಿಕೆ -34) ರಾಜ್ಯದ ಕೃಷಿ ವಿಶ್ವವಿದ್ಯಾಲಯಗಳಲ್ಲಿ ಡಿಪ್ಲೋಮಾ ಬಿ.ಎಸ್ಸಿ. (ಕೃಷಿ) ಹಾಗೂ ತತ್ಸಮಾನ ಪದವಿಗಳಿಗೆ ರೈತರ ಹಾಗೂ ಕೃಷಿ ಕಾರ್ಮಿಕರ ಮಕ್ಕಳ ಪ್ರವೇಶಕ್ಕೆ ಈಗಿರುವ ಮೀಸಲಾತಿ ಪ್ರಮಾಣವನ್ನು ಶೇ. 40ಕ್ಕೆ ಹೆಚ್ಚಿಸಲಾಗುವುದು ಎಂಬುದಾಗಿ ಘೋಷಿಸಿದ್ದರು.

3. ಮೇಲೆ (2)ರಲ್ಲಿ ಓದಲಾದ ದಿನಾಂಕ 05-07-2014ರ ಆದೇಶದಲ್ಲಿ ರಾಜ್ಯದ ಕೃಷಿ ವಿಶ್ವವಿದ್ಯಾಲಯಗಳಲ್ಲಿ ಬಿ.ಎಸ್ಸಿ (ಕೃಷಿ) ಹಾಗೂ ತತ್ಸಮಾನ ಪದವಿಗಳ ಪ್ರವೇಶದಲ್ಲಿ ರೈತರ ಹಾಗೂ ಕೃಷಿ ಕಾರ್ಮಿಕರ ಮಕ್ಕಳಿಗಾಗಿ ನಿಗದಿಪಡಿಸಲಾಗಿದ್ದ ಮೀಸಲಾತಿಯ ಪ್ರಮಾಣವನ್ನು ಶೇ. 23.8 ರಿಂದ ಶೇ. 40ಕ್ಕೆ ಹೆಚ್ಚಿಸಿ, ಈ ಹೆಚ್ಚಳದ ಮೀಸಲಾತಿಯನ್ನು 2 ವರ್ಷದ ಡಿಪ್ಲೊಮಾ (ಕೃಷಿ) ಕಾರ್ಯಕ್ರಮಗಳಿಗೂ ಸಹ ವಿಸ್ತರಿಸಿ ಆದೇಶ ಹೊರಡಿಸಲಾಗಿತ್ತು.

4. ರಾಜ್ಯದ ಕೃಷಿ ವಿಶ್ವವಿದ್ಯಾಲಯಗಳಲ್ಲಿ ಬಿ.ಎಸ್ಸಿ (ಕೃಷಿ) ತತ್ಸಮಾನ ಪದವಿ ಹಾಗೂ 2 ವರ್ಷದ ಡಿಪ್ಲೊಮಾ (ಕೃಷಿ) ಕೋರ್ಸ್‌ಗಳಿಗೆ ಗ್ರಾಮೀಣ ಪ್ರದೇಶದಲ್ಲಿ ಅಭ್ಯಾಸ ಮಾಡಿದ ರೈತರ ಮಕ್ಕಳಿಗೆ ಹೆಚ್ಚಿನ ಪ್ರಮಾಣದ ಸೀಟುಗಳು ಲಭ್ಯವಾಗಲು ಅನುವಾಗುವಂತೆ ಗ್ರಾಮೀಣ ಪ್ರದೇಶದಲ್ಲಿ ಎಸ್.ಎಸ್.ಎಲ್.ಸಿ. ಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಲು ಸರ್ಕಾರವು ನಿರ್ಧರಿಸಿ ಮೇಲೆ (3)ರಲ್ಲಿ ಓದಲಾದ ದಿನಾಂಕ 21-08-2014ರ ಆದೇಶದಲ್ಲಿ "ಗ್ರಾಮೀಣ ಪ್ರದೇಶದಲ್ಲಿ ಎಸ್.ಎಸ್.ಎಲ್.ಸಿ. ಯಲ್ಲಿ ಯಾರು ಉತ್ತೀರ್ಣರಾಗಿರುತ್ತಾರೋ ಅವರಿಗೆ ಪ್ರಥಮ ಆದ್ಯತೆಯನ್ನು ನೀಡುವುದು ಹಾಗೂ ಉಳಿದಂತೆ ಪಹಣಿ ಹೊಂದಿರುವ ಇತರೆ ರೈತರ ಮಕ್ಕಳಿಗೆ ನಂತರದ ಆದ್ಯತೆಯನ್ನು ನೀಡತಕ್ಕದ್ದೆಂದು" ಆದೇಶಿಸಲಾಗಿತ್ತು.

5. ದಿನಾಂಕ 21-08-2014ರ ಆದೇಶದಲ್ಲಿ ಅನುಷ್ಠಾನ ಕುರಿತಂತೆ ಪುನರಾವಲೋಕಿಸಿ ಸದರಿ ಆದೇಶದಲ್ಲಿನ ಗೊಂದಲಗಳನ್ನು ನಿವಾರಿಸಲು ಸದರಿ ಆದೇಶಕ್ಕೆ ತಿದ್ದುಪಡಿ ತರಲು ಉದ್ದೇಶಿಸಿ "ಗ್ರಾಮೀಣ ಪ್ರದೇಶದಲ್ಲಿ 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿರುವ ವಿದ್ಯಾರ್ಥಿಗಳಿಗೆ" ಎಂಬುದಾಗಿ ತಿದ್ದುಪಡಿ ಮಾಡಿ ಮೇಲೆ (4)ರಲ್ಲಿ ಓದಲಾದ ದಿನಾಂಕ 23-01-2015 ರಲ್ಲಿ ತಿದ್ದುಪಡಿ ಆದೇಶ ಹೊರಡಿಸಲಾಗಿತ್ತು.

6. ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ ಕಾಯ್ದೆ 2009ರ ಕಲಂ-6(2)(1) ರಲ್ಲಿ ಇತರರ ಜೊತೆಗೆ ಕೃಷಿಕರು ಮತ್ತು ಕೃಷಿಕರ ಮಕ್ಕಳಿಗೆ ಪ್ರವೇಶದಲ್ಲಿ ಮೀಸಲಾತಿಯನ್ನು ನೀಡುವ ಕುರಿತಂತೆ ಕೃಷಿಕ ಎಂಬ ಪದವನ್ನು ವಿವರಿಸಿ ಅರ್ಥೈಸಲಾಗಿದೆ. ಇದರನ್ವಯ ದಿನಾಂಕ 21-08-2014 ಮತ್ತು 23-01-2015ರ ಅದೇಶದಲ್ಲಿನ ನಿಬಂಧನೆಗಳನ್ನು ಅನುಸರಿಸಿ ಅನುಷ್ಠಾನಗೊಳಿಸಬೇಕಾದಲ್ಲಿ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ ಕಾಯ್ದೆ 2009ರ ಕಲಂ-6(2)(1)ಕ್ಕೆ ತಿದ್ದುಪಡಿ ಮಾಡಬೇಕಾಗುತ್ತದೆ. ಈ ವಿಷಯವನ್ನು ದಿನಾಂಕ 11-02-2015 ರಂದು ಮಾನ್ಯ ಕೃಷಿ ರಾಜ್ಯ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಕೃಷಿ ವಿಶ್ವವಿದ್ಯಾಲಯಗಳ ಸಮನ್ವಯ ಸಮಿತಿಯ ಸಭೆಯಲ್ಲಿ ಸುದೀರ್ಘವಾಗಿ ಚರ್ಚಿಸಿ ಕಾಯ್ದೆಗೆ ತಿದ್ದುಪಡಿ ಮಾಡಿದ ನಂತರ ಮೀಸಲಾತಿಯನ್ನು ವಿಶಿಷ್ಟವಾಗಿ ಅನುಷ್ಠಾನಗೊಳಿಸಬಹುದಾಗಿರುವುದರಿಂದ ಸದ್ಯಕ್ಕೆ ದಿನಾಂಕ 21-08-2014 ಹಾಗೂ 23-01-2015ರ ಆದೇಶಗಳನ್ನು ಹಿಂದಕ್ಕೆ ಪಡೆಯುವಂತೆ ತೀರ್ಮಾನಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೃಇ 22 ಕೃವಿವಿ 2014, ಬೆಂಗಳೂರು, ದಿನಾಂಕ: 06ನೇ ಮಾರ್ಚ್, 2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸಂಖ್ಯೆ ಕೃಇ 22 ಕೃವಿವಿ 2014 ದಿನಾಂಕ 21-08-2014ರ ಸರ್ಕಾರಿ ಆದೇಶ ಮತ್ತು 23-01-2015ರ ತಿದ್ದುಪಡಿ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ದಿನಾಂಕ 05–07–2014 ಸಂಖ್ಯೆ ಕೃಇ 22 ಕೃವಿವಿ 2014ರ ಸರ್ಕಾರಿ ಆದೇಶ ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಆರ್. ಬಸವರಾಜಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಇಲಾಖೆ (ಸೇವೆಗಳು ಮತ್ತು ಸಮನ್ವಯ)

P.R. 255
SC - 25

## ಒಳಾಡಳಿತ ಸಚಿವಾಲಯ

**ವಿಷಯ :** ಕಾರಾಗೃಹಗಳಲ್ಲಿನ ಬಂದಿಗಳ ಕೂಲಿ ದರವನ್ನು ಪರಾರ್ಮಶಿಸುವ ಸಂಬಂಧದಲ್ಲಿ ಕೂಲಿ ನಿಗದಿ ಮಂಡಳಿ ಸೃಜನೆ ಕುರಿತು.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 298 ಪಿಆರ್‌ಎ 2008, ದಿನಾಂಕ 05–9–2009.
2) ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರವರ ಪತ್ರ ಸಂಖ್ಯೆ : ಎಡಿಎಂ 4/ಸಿಆರ್–107/2010–11, ದಿನಾಂಕ 31–12–2014.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಕಾರಾಗೃಹಗಳಲ್ಲಿನ ಬಂದಿಗಳಿಗೆ ದಿನಗೂಲಿ ದರವನ್ನು ಪರಿಷ್ಕರಿಸಲು ಶಿಫಾರಸ್ಸು/ವರದಿ ನೀಡುವ ಸಂಬಂಧದಲ್ಲಿ ಕೂಲಿ ನಿಗದಿ ಮಂಡಳಿಯನ್ನು ನೇಮಕ ಮಾಡಿದ್ದು, ಸದರಿ ಮಂಡಳಿಯು ಪ್ರಸ್ತುತ ಅಸ್ತಿತ್ವದಲ್ಲಿರುವುದಿಲ್ಲ.

ಓದಲಾದ (2)ರ ಪತ್ರದಲ್ಲಿ ಕಾರಾಗೃಹ ಇಲಾಖೆಯ ಮುಖ್ಯಸ್ಥರು ಕೂಲಿ ನಿಗದಿ ಮಂಡಳಿಯನ್ನು ರಚಿಸಲು ಹಾಗೂ ಕಾರಾಗೃಹಗಳ ಬಂದಿಗಳಿಗೆ ಪರಿಷ್ಕೃತ ಕೂಲಿ ದರವನ್ನು ನಿಗದಿಪಡಿಸಲು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 46 ಪಿಆರ್‌ಎ 2015, ಬೆಂಗಳೂರು, ದಿನಾಂಕ: 23ನೇ ಮಾರ್ಚ್, 2015**

ರಾಜ್ಯದ ಕಾರಾಗೃಹಗಳಲ್ಲಿನ ಬಂದಿಗಳ ಕೂಲಿ ದರಗಳನ್ನು ನೆರೆ ಹೊರೆಯ ರಾಜ್ಯಗಳಾದ ತಮಿಳುನಾಡು, ಮಹಾರಾಷ್ಟ್ರ ಮತ್ತು ಹಿಂದಿನ ಆಂಧ್ರ ಪ್ರದೇಶ ರಾಜ್ಯಗಳಲ್ಲಿ ನೀಡಲಾಗುತ್ತಿರುವ ಕೂಲಿ ದರಗಳ (ಕೌಶಲ್ಯ, ಕೌಶಲ್ಯ ರಹಿತ ಹಾಗೂ ಪರಿಣಿತ ಕೌಶಲ್ಯ) ವಿವರಗಳನ್ನು ಪರಿಶೀಲನೆ ಮಾಡಿ ರಾಜ್ಯದ ಬಂದಿಗಳಿಗೆ ಕೂಲಿ ದರ ಪರಾಮರ್ಶಿಸಿ ತನ್ನ ವರದಿ/ಶಿಫಾರಸ್ಸನ್ನು ಸಲ್ಲಿಸುವ ಸಂಬಂಧದಲ್ಲಿ ಈ ಕೆಳಕಂಡ ಅಧಿಕಾರಿಗಳನ್ನು ಒಳಗೊಂಡ ಕೂಲಿ ನಿಗದಿ ಮಂಡಳಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಿದೆ :–

| ಕ್ರ.ಸಂ. | ಅಧಿಕಾರಿಗಳ ವಿವರ | |
|---|---|---|
| 1 | ಕಾರ್ಮಿಕ ಆಯುಕ್ತರು | ಅಧ್ಯಕ್ಷರು |
| 2 | ಸರ್ಕಾರದ ಉಪ/ಸಹ/ಅಪರ ಕಾರ್ಯದರ್ಶಿ (ಕಾನೂನು ಮತ್ತು ಸುವ್ಯವಸ್ಥೆ) ಒಳಾಡಳಿತ ಇಲಾಖೆ | ಸದಸ್ಯರು |
| 3 | ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ (ಜಿ.ಪಂ.) ಆರ್ಥಿಕ ಇಲಾಖೆ | ಸದಸ್ಯರು |
| 4 | ಸರ್ಕಾರದ ಉಪ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಕೈಗಾರಿಕೆಗಳು) | ಸದಸ್ಯರು |
| 5 | ಕಾರಾಗೃಹಗಳ ಇಲಾಖೆಯ ಹೆಚ್ಚುವರಿ ಮಹಾನಿರೀಕ್ಷಕರು (ಕೇಂದ್ರ ಸ್ಥಾನ), ಬೆಂಗಳೂರು | ಸದಸ್ಯರು |
| 6 | ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |

**ಷರತ್ತುಗಳು :**

1. ಈ ಕೂಲಿ ನಿಗದಿ ಮಂಡಳಿಯು ಮುಂದಿನ ಆದೇಶದವರೆಗೆ ಖಾಯಂ ಮಂಡಳಿಯಾಗಿರುತ್ತದೆ.
2. ಈ ಮಂಡಳಿಯು ಕೂಲಿ ದರ ನಿಗದಿ ಸಂಬಂಧದಲ್ಲಿ ಕೂಲಿ ಕನಿಷ್ಠ ನಿಗದಿ ಕಾಯ್ದೆ ಹಾಗೂ ಜಾರಿಯಲ್ಲಿರುವ ತತ್ಸಂಬಂಧದ ನಿಯಮಗಳನ್ನು ಗಮನಿಸತಕ್ಕದ್ದು.
3. ಸದರಿ ಮಂಡಳಿಯು ಪ್ರತಿ ಮೂರು ವರ್ಷಗಳಿಗೊಮ್ಮೆ ತನ್ನ ಪರಿಷ್ಕೃತ ಕೂಲಿ ದರಗಳ ಶಿಫಾರಸ್ಸನ್ನು ಕಾರಾಗೃಹ ಇಲಾಖೆಯ ಮುಖ್ಯಸ್ಥರಿಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ.ಎಸ್. ಜೋಗೋಜೆ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

P.R. 256
SC - 50

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಕಾಮಗಾರಿಗಳ ಗುಣಮಟ್ಟ ನಿಯಂತ್ರಣ ಕಾರ್ಯಪಡೆಯ ಉಲ್ಲೇಖ ನಿಬಂಧನೆಗಳ (Terms of Reference) ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ : ಲೋಇ 121 ಇಎಪಿ 2013, ದಿನಾಂಕ 13-10-2014.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಡಾ॥ ಬಿ.ಆರ್. ಶ್ರೀನಿವಾಸ ಮೂರ್ತಿ, ಅಧ್ಯಕ್ಷರು, ನಿವೃತ್ತ ಪ್ರೊಫೆಸರ್, ಭಾರತೀಯ ವಿಜ್ಞಾನ ಸಂಸ್ಥೆ, ಇವರ ಅಧ್ಯಕ್ಷತೆಯಲ್ಲಿ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಸರ್ಕಾರಿ ವಲಯದಲ್ಲಿನ ಎಲ್ಲಾ ಕಾಮಗಾರಿಗಳ ನಿರ್ಮಾಣದಲ್ಲಿ ಗುಣಭರವಸೆ ಮೇಲ್ವಿಚಾರಣೆಗಾಗಿ ಗುಣಮಟ್ಟ ನಿಯಂತ್ರಣ ಕಾರ್ಯಪಡೆಯನ್ನು ರಚಿಸಲಾಗಿತ್ತು.

| ಕ್ರ.ಸಂ. | ಸದಸ್ಯರ ಹೆಸರು | ಹುದ್ದೆ |
|---|---|---|
| 1 | ಪ್ರೊ. ಬಿ.ಆರ್. ಶ್ರೀನಿವಾಸಮೂರ್ತಿ<br>ನಿವೃತ್ತ ಪ್ರೊಫೆಸರ್,<br>ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು | ಅಧ್ಯಕ್ಷರು |
| 2 | ಡಾ॥ ಎಸ್. ಚಿನ್ನಸ್ವಾಮಿ<br>ನಿವೃತ್ತ ಇಂಜಿನಿಯರ್-ಇನ್-ಚೀಫ್,<br>ಸಿಪಿಡಬ್ಲ್ಯೂಡಿ, ಬೆಂಗಳೂರು | ಸಹ ಅಧ್ಯಕ್ಷರು |
| 3 | ಶ್ರೀ ಎಲ್. ಬಸವರಾಜ್<br>ನಿವೃತ್ತ ಸರ್ಕಾರದ ಕಾರ್ಯದರ್ಶಿಗಳು<br>ಮೈಸೂರು | ಸದಸ್ಯರು |
| 4 | ಶ್ರೀ ಕೆ.ಬಿ. ದೇವರಾಜ್<br>ನಿವೃತ್ತ ಸರ್ಕಾರದ ಕಾರ್ಯದರ್ಶಿ<br>ಬೆಂಗಳೂರು | ಸದಸ್ಯರು |
| 5 | ಶ್ರೀ ಸಿ.ಎನ್. ಬಾಬು<br>ನಿವೃತ್ತ ಮುಖ್ಯ ಇಂಜಿನಿಯರ್<br>ಮೈಸೂರು | ಸದಸ್ಯರು |
| 6 | ಶ್ರೀ ಟಿ.ಡಿ. ಮನಮೋಹನ್<br>ನಿವೃತ್ತ ಮುಖ್ಯ ಇಂಜಿನಿಯರ್, ಮೈಸೂರು | ಸದಸ್ಯರು |
| 7 | ಶ್ರೀ ಸಿ.ಎಂ. ಶಿವಶಂಕರ್<br>ನಿವೃತ್ತ ಮುಖ್ಯ ಇಂಜಿನಿಯರ್, ಬೆಂಗಳೂರು | ಸದಸ್ಯರು |
| 8 | ಡಾ॥ ಆರ್. ಜಗದೀಶ್<br>ನಿವೃತ್ತ ಪ್ರೊಫೆಸರ್, ಯು.ವಿ.ಸಿ.ಇ.<br>ಬೆಂಗಳೂರು | ಸದಸ್ಯರು |
| 9 | ಡಾ॥ ಕೃಷ್ಣಮೂರ್ತಿ<br>ನಿವೃತ್ತ ಪ್ರೊಫೆಸರ್, ಬೆಂಗಳೂರು | ಸದಸ್ಯರು |

ಸದರಿ ಆದೇಶದಲ್ಲಿ ಕಾರ್ಯಪಡೆಯ ಉಲ್ಲೇಖ ನಿಬಂಧನೆಗಳ ಬಗ್ಗೆ ಪ್ರತ್ಯೇಕ ಸರ್ಕಾರಿ ಆದೇಶವನ್ನು ಹೊರಡಿಸಲಾಗುವುದೆಂದು ತಿಳಿಸಲಾಗಿತ್ತು. ಕಾರ್ಯಪಡೆಯ ಉಲ್ಲೇಖ ನಿಬಂಧನೆಗಳ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 01 ಆರ್‌ಡಿಎಫ್ 2015, ಬೆಂಗಳೂರು, ದಿನಾಂಕ: 17ನೇ ಮಾರ್ಚ್, 2015**

ಕರ್ನಾಟಕ ಸರ್ಕಾರದ ವಲಯಗಳಲ್ಲಿನ ಎಲ್ಲಾ ಕಾಮಗಾರಿಗಳ ನಿರ್ಮಾಣದಲ್ಲಿ ಗುಣಭರವಸೆ ಮೇಲ್ವಿಚಾರಣೆಗಾಗಿ ಡಾ॥ ಬಿ.ಆರ್. ಶ್ರೀನಿವಾಸಮೂರ್ತಿ, ಅಧ್ಯಕ್ಷರು, ನಿವೃತ್ತ ಪ್ರೊಫೆಸರ್, ಭಾರತೀಯ ವಿಜ್ಞಾನ ಸಂಸ್ಥೆ, ಇವರ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಕಾರ್ಯಪಡೆಯ ಉಲ್ಲೇಖ ನಿಬಂಧನೆಗಳು ಕೆಳಕಂಡಂತೆ ಇರುತ್ತದೆಂದು ಆದೇಶಿಸಲಾಗಿದೆ.

**TERMS AND REFERENCES FOR THE TASK FORCE ON QUALITY ASSURANCE IN PUBLIC WORKS**

1. The Task Force will formulate guidelines for preparation of projects and ensure quality in constructions.
2. Wherever necessary, the Task Force will advise the concerned to adopt appropriate specifications as per technical requirement to ensure quality in construction at design stage as well as during execution.

3. The Task Force will advise the concerned about all important testing activities, the relevant Indian Standard documents, Indian Roads Congress Standards and setting up of site laboratories with requisite facilities. The Task force will also examine the adequacy of testing facilities available or .accessible, routine test facilities, NDT facilities and field test facilities.
4. The Task Force will review at regular intervals, the availability of suitable staff to ensure quality execution of works.
5. The Task Force will suggest appropriate corrective measures to combat the problems if any.
6. The Task Force will examine in depth the technical aspects of any works referred to them and suggest appropriate measures to ensure quality ..
7. The Task Force may choose, as its discretion, any ongoing project and examine thoroughly the quality check records and course of execution to get assured that the things are on right lines, if not, the Task Force will advise the concerned the ways and means to ensure desired quality levels.
8. The Task Force may advise systemic changes to enhance the performance and ensure quality of works.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಆರ್. ಶಿವಶಂಕರ್**

ವಿಶೇಷಾಧಿಕಾರಿ (ನಬಾರ್ಡ್)

ಲೋಕೋಪಯೋಗಿ, ಬಂದರು ಮತ್ತು

ಒಳನಾಡು ಜಲಸಾರಿಗೆ ಇಲಾಖೆ

**P.R. 257**

**SC - 20**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಲಬುರಗಿ ಕಚೇರಿಯನ್ನು ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು, ಇವರ ಪತ್ರ ಸಂ: ಮುಇಂ:ರಾಹೆ:ಇವಿ: ಸಿ6: 2014-15: 3008, ದಿನಾಂಕ : 20-10-2014.

**ಪ್ರಸ್ತಾವನೆ:**

ಮೇಲೆ ಓದಲಾದ ಮುಖ್ಯ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು, ಇವರ ಪತ್ರದಲ್ಲಿ ಕಲಬುರಗಿ ವಿಭಾಗ ವ್ಯಾಪ್ತಿಯಲ್ಲಿ ಸುಮಾರು 605205 ಉದ್ದದ ರಾಷ್ಟ್ರೀಯ ಹೆದ್ದಾರಿಗಳು ಇದ್ದು, ಕಲಬುರಗಿದಲ್ಲಿ ವಿಭಾಗ ಕಚೇರಿ ಇಲ್ಲದ ಕಾರಣ ಹಾಲಿ ಇರುವ ಕಾಮಗಾರಿಗಳನ್ನು ಕಾರ್ಯಗತಗೊಳಿಸಲು ಕಷ್ಟಸಾಧ್ಯವಾಗಿರುತ್ತದೆ. ಈ ವಿಭಾಗದಡಿಯಲ್ಲಿ ಬರುವ ರಾಷ್ಟ್ರೀಯ ಹೆದ್ದಾರಿ 50, 150, 150ಎ ಮತ್ತು 150ಇ ರಸ್ತೆಗಳಲ್ಲಿ ಹಾಲಿ ಇರತಕ್ಕಂತಹ ರಸ್ತೆಗಳ DBFOT/EPC ಅಡಿಯಲ್ಲಿ ಅಭಿವೃದ್ಧಿಪಡಿಸುವ ಸಲುವಾಗಿ ಹಾಲಿ ಇರುವ ರಸ್ತೆಯ ಸರ್ವೆ ಕಾಮಗಾರಿ, ಉಪಕರಣಗಳ ಸ್ಥಳಾಂತರ, ಯೋಜನಾ ವರದಿ ತಯರಿಕೆ, ಹಾಗೂ ಅಂದಾಜು ಪಟ್ಟಿ ತಯಾರಿಕೆ ಈ ರೀತಿ ಹಲವಾರು ಕಾರ್ಯಚಟುವಟಿಕೆಗಳನ್ನು ಏಕಕಾಲದಲ್ಲಿ ನಿರ್ವಹಿಸಬೇಕಾಗಿರುವುದರಿಂದ ರಾಷ್ಟ್ರೀಯ ಹೆದ್ದಾರಿ ವಲಯ, ಬೆಂಗಳೂರು ಕೇಂದ್ರ ಕಚೇರಿಯಲ್ಲಿನ ಉಪ ಮುಖ್ಯ ಇಂಜಿನಿಯರ್ ಹುದ್ದೆಯನ್ನು ಕಾರ್ಯಪಾಲಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಲಬುರಗಿಗೆ ಸ್ಥಳಾಂತರಿಸಲು ಹಾಗೂ ರಾಷ್ಟ್ರೀಯ ಹೆದ್ದಾರಿ ವಲಯ/ವಿಭಾಗ/ ಉಪ ವಿಭಾಗದಲ್ಲಿ ಹಾಲಿ ಖಾಲಿ ಇರುವ ಈ ಕೆಳಕಂಡ ಅಧಿಕಾರಿ ಹಾಗೂ ಸಿಬ್ಬಂದಿ ಹುದ್ದೆಗಳನ್ನು ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಲಬುರಗಿ ಕಚೇರಿಗೆ ಮರುಹೊಂದಾಣಿಕೆ ಮಾಡಿಕೊಂಡು ಸ್ಥಳಾಂತರಿಸಲು ಕೋರಿರುತ್ತಾರೆ :

| ಕ್ರಮ ಸಂಖ್ಯೆ | ಹುದ್ದೆಯ ವಿವರ | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಯಪಾಲಕ ಇಂಜಿನಿಯರ್ | 01 |
| 2 | ಲೆಕ್ಕ ಪರಿಶೋಧನಾಧಿಕಾರಿ | 01 |
| 3 | ಸಹಾಯಕ ಇಂಜಿನಿಯರ್ | 03 |
| 4 | ಪ್ರಥಮ ದರ್ಜೆ ಲೆಕ್ಕ ಸಹಾಯಕ | 01 |
| 5 | ಪ್ರಥಮ ದರ್ಜೆ ಸಹಾಯಕ | 01 |
| 6 | ದ್ವಿತೀಯ ದರ್ಜೆ ಲೆಕ್ಕ ಸಹಾಯಕ | 01 |

| ಕ್ರಮ ಸಂಖ್ಯೆ | ಹುದ್ದೆಯ ವಿವರ | ಹುದ್ದೆಗಳ ಸಂಖ್ಯೆ |
|---|---|---|
| 7 | ದ್ವಿತೀಯ ದರ್ಜೆ ಸಹಾಯಕ | 01 |
| 8 | ಕಂಪ್ಯೂಟರ್ ಆಪರೇಟರ್ | 01 |
| 9 | ಡಿ ಗ್ರೂಪ್ : ಕಾವಲುಗಾರ | 02 |
| | **ಒಟ್ಟು** | **12** |

ಮೇಲೆ ಪ್ರಸ್ತಾಪಿಸಿದ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 463 ಸೇಸಎ 2014 (ಭಾಗ), ಬೆಂಗಳೂರು, ದಿನಾಂಕ: 22ನೇ ನವೆಂಬರ್, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ, ಸಾರ್ವಜನಿಕ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಲಬುರಗಿ ಕಚೇರಿಯನ್ನು ತಾತ್ಕಾಲಿಕವಾಗಿ ತೆರೆದು, ಸದರಿ ಕಚೇರಿಗೆ ರಾಷ್ಟ್ರೀಯ ಹೆದ್ದಾರಿ ವಲಯ, ಬೆಂಗಳೂರು ಇಲ್ಲಿನ ಉಪ ಮುಖ್ಯ ಇಂಜಿನಿಯರ್ ಹುದ್ದೆಯನ್ನು ತಾತ್ಕಾಲಿಕವಾಗಿ ಸ್ಥಳಾಂತರಿಸಿ ಹಾಗೂ ರಾಷ್ಟ್ರೀಯ ಹೆದ್ದಾರಿ ವಲಯ/ವಿಭಾಗ/ ಉಪ ವಿಭಾಗದಲ್ಲಿ ಹಾಲಿ ಖಾಲಿ ಇರುವ ಈ ಕೆಳಕಂಡ ಅಧಿಕಾರಿ ಹಾಗೂ ಸಿಬ್ಬಂದಿ ಹುದ್ದೆಗಳನ್ನು ಮರುಹೊಂದಾಣಿಕೆ ಮಾಡಿ ಕಾರ್ಯಪಾಲಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಲಬುರಗಿ ಇಲ್ಲಿ ತಾತ್ಕಾಲಿಕವಾಗಿ ಸ್ಥಳಾಂತರಿಸಿ ಆದೇಶಿಸಲಾಗಿದೆ :

| ಕ್ರಮ ಸಂಖ್ಯೆ | ಹುದ್ದೆಯ ವಿವರ | ಹುದ್ದೆಗಳನ್ನು ಸ್ಥಳಾಂತರಿಸುತ್ತಿರುವ ರಾಷ್ಟ್ರೀಯ ಹೆದ್ದಾರಿ ವಲಯ/ವಿಭಾಗ/ ಉಪ ವಿಭಾಗ ಕಚೇರಿಗಳು | ಹುದ್ದೆಗಳ ಸಂಖ್ಯೆ |
|---|---|---|---|
| 1 | ಕಾರ್ಯಪಾಲಕ ಇಂಜಿನಿಯರ್ (ಉಪ ಮುಖ್ಯ ಇಂಜಿನಿಯರ್) | ರಾಷ್ಟ್ರೀಯ ಹೆದ್ದಾರಿ ವಲಯ ಕೇಂದ್ರ ಕಚೇರಿ, ಬೆಂಗಳೂರು | 01 |
| 2 | ಲೆಕ್ಕ ಪರಿಶೋಧನಾಧಿಕಾರಿ | ರಾಷ್ಟ್ರೀಯ ಹೆದ್ದಾರಿ ವಲಯ ಕೇಂದ್ರ ಕಚೇರಿ, ಬೆಂಗಳೂರು | 01 |
| 3 | ಸಹಾಯಕ ಇಂಜಿನಿಯರ್ | ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಹುನಗುಂದ | 01 |
| | | ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಕಾರವಾರ | 01 |
| | | ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಹೊನ್ನಾವರ | 01 |
| 4 | ಪ್ರಥಮ ದರ್ಜೆ ಲೆಕ್ಕ ಸಹಾಯಕ | ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಹುಮ್ನಾಬಾದ್ | 01 |
| 5 | ಪ್ರಥಮ ದರ್ಜೆ ಸಹಾಯಕ | ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಬಿಜಾಪುರ | 01 |
| 6 | ದ್ವಿತೀಯ ದರ್ಜೆ ಲೆಕ್ಕ ಸಹಾಯಕ | ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಕಾರವಾರ | 01 |
| 7 | ದ್ವಿತೀಯ ದರ್ಜೆ ಸಹಾಯಕ | ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಬಿಜಾಪುರ | 01 |
| 8 | ಕಂಪ್ಯೂಟರ್ ಆಪರೇಟರ್ | ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಹುಮ್ನಾಬಾದ್ | 01 |

| ಕ್ರಮ ಸಂಖ್ಯೆ | ಹುದ್ದೆಯ ವಿವರ | ಹುದ್ದೆಗಳನ್ನು ಸ್ಥಳಾಂತರಿಸುತ್ತಿರುವ ರಾಷ್ಟ್ರೀಯ ಹೆದ್ದಾರಿ ವಲಯ/ವಿಭಾಗ/ ಉಪ ವಿಭಾಗ ಕಚೇರಿಗಳು | ಹುದ್ದೆಗಳ ಸಂಖ್ಯೆ |
|---|---|---|---|
| 9 | ಡಿ ಗ್ರೂಪ್ : ಕಾವಲುಗಾರ | ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ | 01 |
| | | ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಕಾರವಾರ | 01 |
| | **ಒಟ್ಟು** | | **12** |

ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996 ರಲ್ಲಿ ಸರ್ಕಾರದ ಕಾರ್ಯದರ್ಶಿಯವರುಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಹೆಚ್. ಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ, ಬಂದರು ಮತ್ತು

ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ)

**P.R. 258**

**SC - 100**

## ಒಳಾಡಳಿತ ಸಚಿವಾಲಯ

**ವಿಷಯ:** ಚಿಕ್ಕಮಗಳೂರು ಜಿಲ್ಲೆಯ ಯಗಟಿ ಠಾಣಾ ವ್ಯಾಪ್ತಿಯ ಕೆಲವೊಂದು ಗ್ರಾಮಗಳನ್ನು ಇತರೆ ಪೊಲೀಸ್ ಠಾಣೆಗೆ ಸೇರಿಸುವ ಬಗ್ಗೆ.

**ಓದಲಾಗಿದೆ:** ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ: ಆರ್‌ಎಲ್‌ಎನ್(6)38/ 2014–15, ದಿನಾಂಕ: 08–12–2014.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 08–12–2014 ರ ಪತ್ರದಲ್ಲಿ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಚಿಕ್ಕಮಗಳೂರು ಜಿಲ್ಲಾ ಪೊಲೀಸ್ ಘಟಕದ ತರೀಕೆರೆ ಉಪವಿಭಾಗದ ಬೀರೂರು ವೃತ್ತಕ್ಕೆ ಸೇರಿದ ಯಗಟಿ ಪೊಲೀಸ್ ಠಾಣೆಯ ವ್ಯಾಪ್ತಿಗೆ ಬರುವ ಕೆಳಕಂಡ 6 ಗ್ರಾಮಗಳು ಯಗಟಿ ಠಾಣೆಯಿಂದ ಹೆಚ್ಚಿನ ದೂರದಲ್ಲಿದ್ದು, ಸಾರ್ವಜನಿಕರಿಗೆ ಅನಾನುಕೂಲವಾಗುತ್ತಿದೆ. ಅಲ್ಲದೇ, ಸದರಿ ಗ್ರಾಮಗಳನ್ನು ಸಾರ್ವಜನಿಕರ ಅನುಕೂಲತೆಯ ದೃಷ್ಟಿಯಿಂದ ಹತ್ತಿರದ ಪೊಲೀಸ್ ಠಾಣೆಗಳಿಗೆ ಸೇರಿಸುವಂತೆ ಕ್ಷೇತ್ರದ ಜನಪ್ರತಿನಿಧಿಗಳ ಕೋರಿಕೆಯಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಚಿಕ್ಕಮಗಳೂರು ಜಿಲ್ಲಾ ಪೊಲೀಸ್ ಘಟಕದ ತರೀಕೆರೆ ಉಪ ವಿಭಾಗದ ಬೀರೂರು ವೃತ್ತಕ್ಕೆ ಸೇರಿದ ಯಗಟಿ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿರುವ ಸದರಿ 06 ಗ್ರಾಮಗಳಿಗೆ ಯಗಟಿ ಠಾಣೆಯಿಂದ ಇರುವ ದೂರ ಹಾಗೂ ಪಸ್ತುತ ಸೇರ್ಪಡೆಗೊಳಿಸಬೇಕಾದ ಠಾಣೆಯ ವಿವರಗಳು ಈ ಕೆಳಗಿನಂತಿದೆ.

| **ಕ್ರ. ಸಂ.** | **ಗ್ರಾಮದ ಹೆಸರು** | **ಪ್ರಸ್ತುತ ಯಗಟಿ ಠಾಣೆಯಿಂದ ಇರುವ ದೂರ** | **ಯಾವ ಪೊಲೀಸ್ ಠಾಣೆಗೆ ಸೇರಿಸಬೇಕು ಮತ್ತು ಸದರಿ ಠಾಣೆಯಿಂದ ಇರುವ ದೂರ** | |
|---|---|---|---|---|
| **1** | **2** | **3** | **4** | **5** |
| 1 | ಹಂಪಾಪುರ | 22 ಕಿ.ಮೀ. | ಸಿಂಗಟಗೆರೆ ಪೊಲೀಸ್ ಠಾಣೆ | 6 ಕಿ.ಮೀ. |
| 2 | ನಂಜಪ್ಪನಹಳ್ಳಿ | 25 ಕಿ.ಮೀ. | ಸಿಂಗಟಗೆರೆ ಪೊಲೀಸ್ ಠಾಣೆ | 8 ಕಿ.ಮೀ. |
| 3 | ಎಂ.ಚೋಮನಹಳ್ಳಿ | 24 ಕಿ.ಮೀ. | ಬೀರೂರು ಪೊಲೀಸ್ ಠಾಣೆ | 8 ಕಿ.ಮೀ. |
| 4 | ಮೇಲನಹಳ್ಳಿ | 22 ಕಿ.ಮೀ. | ಬೀರೂರು ಪೊಲೀಸ್ ಠಾಣೆ | 10 ಕಿ.ಮೀ. |
| 5 | ಮಲ್ಲಿದೇವಿ ಹಳ್ಳಿ | 19 ಕಿ.ಮೀ. | ಕಡೂರು ಪೊಲೀಸ್ ಠಾಣೆ | 5 ಕಿ.ಮೀ. |
| 6 | ಸೂರಾಪೂರ | 18 ಕಿ.ಮೀ. | ಕಡೂರು ಪೊಲೀಸ್ ಠಾಣೆ | 6 ಕಿ.ಮೀ. |

ಆದ್ದರಿಂದ, ಯಗಟಿ ಠಾಣೆಯಿಂದ ದೂರದಲ್ಲಿರುವ ಗ್ರಾಮಗಳನ್ನು ಅವುಗಳಿಗೆ ಹತ್ತಿರವಿರುವ ಪೊಲೀಸ್ ಠಾಣೆಗಳಿಗೆ ಸೇರ್ಪಡೆಗೊಳಿಸುವುದು ಆಡಳಿತಾತ್ಮಕ ದೃಷ್ಟಿಯಿಂದ ಅವಶ್ಯಕವಾಗಿರುತ್ತದೆ. ಹಾಗೂ ಇದರಿಂದ ಗ್ರಾಮಸ್ಥರ ಸಮಸ್ಯೆಗಳಿಗೆ ಪೊಲೀಸ್ ಇಲಾಖಾ ವತಿಯಿಂದ ತಕ್ಷಣ ಸ್ಪಂದಿಸಲು ಸಹಾಯಕವಾಗುತ್ತದೆ. ಪ್ರಸ್ತಾವನೆಯಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ಹೊರೆ ಉಂಟಾಗುವುದಿಲ್ಲವೆಂದು ತಿಳಿಸುತ್ತಾ, ಚಿಕ್ಕಮಗಳೂರು ಜಿಲ್ಲೆಯ ಯಗಟಿ ಠಾಣಾ ವ್ಯಾಪ್ತಿಯ ಕೆಲವೊಂದು ಗ್ರಾಮಗಳನ್ನು ಇತರೆ ಪೊಲೀಸ್ ಠಾಣೆಗೆ ಸೇರಿಸಿ ಸರ್ಕಾರದ ಮಂಜೂರಾತಿ ಕೋರಿರುತ್ತಾರೆ.

ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 311 ಪಿಓಪಿ 2014, ಬೆಂಗಳೂರು, ದಿನಾಂಕ: 14–01–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಚಿಕ್ಕಮಗಳೂರು ಜಿಲ್ಲಾ ಪೊಲೀಸ್ ಘಟಕದ ತರೀಕೆರೆ ಉಪವಿಭಾಗದ ಬೀರೂರು ವೃತ್ತಕ್ಕೆ ಸೇರಿದ ಯಗಟಿ ಪೊಲೀಸ್ ಠಾಣೆಯ ವ್ಯಾಪ್ತಿಗೆ ಬರುವ 6 ಗ್ರಾಮಗಳನ್ನು ಅವುಗಳಿಗೆ ಹತ್ತಿರವಿರುವ ಕೆಳಕಂಡ ಪೊಲೀಸ್ ಠಾಣಾ ವ್ಯಾಪ್ತಿಗೆ ಸೇರಿಸಲು ಸರ್ಕಾರದ ಅನುಮೋದನೆಯನ್ನು ನೀಡಿದೆ.

| ಕ್ರ. ಸಂ. | ಗ್ರಾಮದ ಹೆಸರು | ಪ್ರಸ್ತುತ ಪೊಲೀಸ್ ಠಾಣೆ | ಸೇರ್ಪಡೆ ಮಾಡುವ ಪೊಲೀಸ್ ಠಾಣೆ |
|---|---|---|---|
| **1** | **2** | **3** | **4** |
| 1 | ಹಂಪಾಪುರ | ಯಗಟಿ ಠಾಣೆ | ಸಿಂಗಟಗೆರೆ ಪೊಲೀಸ್ ಠಾಣೆ |
| 2 | ನಂಜಪ್ಪನಹಳ್ಳಿ | ಯಗಟಿ ಠಾಣೆ | ಸಿಂಗಟಗೆರೆ ಪೊಲೀಸ್ ಠಾಣೆ |
| 3 | ಎಂ.ಚೋಮನಹಳ್ಳಿ | ಯಗಟಿ ಠಾಣೆ | ಬೀರೂರು ಪೊಲೀಸ್ ಠಾಣೆ |
| 4 | ಮೇಲನಹಳ್ಳಿ | ಯಗಟಿ ಠಾಣೆ | ಬೀರೂರು ಪೊಲೀಸ್ ಠಾಣೆ |
| 5 | ಮಲ್ಲಿದೇವಿ ಹಳ್ಳಿ | ಯಗಟಿ ಠಾಣೆ | ಕಡೂರು ಪೊಲೀಸ್ ಠಾಣೆ |
| 6 | ಸೂರಾಪೂರ | ಯಗಟಿ ಠಾಣೆ | ಕಡೂರು ಪೊಲೀಸ್ ಠಾಣೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 88
**ಹೆಚ್.ಆರ್. ಪುಟ್ಟೇಗೌಡ**

S.C. 50
ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ. (ಪೊಲೀಸ್ ವೆಚ್ಚ)

## ಒಳಾಡಳಿತ ಸಚಿವಾಲಯ

**ವಿಷಯ:** ಮಂಡ್ಯ ಜಿಲ್ಲೆ, ನಾಗಮಂಗಲ ಪಟ್ಟಣದಲ್ಲಿ ಹೊಸದಾಗಿ ಪೊಲೀಸ್ ಉಪ–ವಿಭಾಗ ತೆರೆಯುವ ಕುರಿತು

**ಓದಲಾಗಿದೆ:** ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ: ಆರ್‌ಎಲ್‌ಎನ್(5)10/2007–08, ದಿನಾಂಕ: 22–10–2013 & 10–06–2014.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಮಂಡ್ಯ ಜಿಲ್ಲೆಯಲ್ಲಿ ಪ್ರಸ್ತುತ ಶ್ರೀರಂಗಪಟ್ಟಣ ಉಪ–ವಿಭಾಗ, ಮಳವಳ್ಳಿ ಉಪ–ವಿಭಾಗ ಮತ್ತು ಮಂಡ್ಯ ಉಪ–ವಿಭಾಗ ಎಂಬ 3 ಪೊಲೀಸ್ ಉಪ–ವಿಭಾಗಗಳಿದ್ದು, ಇವುಗಳಲ್ಲಿ ಮಂಡ್ಯ ಉಪ–ವಿಭಾಗ, ವ್ಯಾಪ್ತಿಯಲ್ಲಿರುವ ನಾಗಮಂಗಲ ವೃತ್ತವನ್ನು ಹಾಗೂ ಶ್ರೀರಂಗಪಟ್ಟಣ ಉಪ–ವಿಭಾಗದ ವ್ಯಾಪ್ತಿಯಲ್ಲಿರುವ ಕೆ.ಆರ್.ಪೇಟೆ ವೃತ್ತವನ್ನು ಬೇರ್ಪಡಿಸಿ ನಾಗಮಂಗಲದಲ್ಲಿ ಹೊಸದಾಗಿ ಒಂದು ಪೊಲೀಸ್ ಉಪ–ವಿಭಾಗವನ್ನು ತೆರೆಯುವುದು ಆಡಳಿತಾತ್ಮಕ ದೃಷ್ಟಿಯಿಂದ ಅವಶ್ಯಕತೆ ಇರುತ್ತದೆ. ಆದುದರಿಂದ ಮಂಡ್ಯ ಜಿಲ್ಲೆ, ನಾಗಮಂಗಲದಲ್ಲಿ ಹೊಸದಾಗಿ ಒಂದು ಪೊಲೀಸ್ ಉಪ–ವಿಭಾಗವನ್ನು ಹಾಗೂ ಈ ಉಪ–ವಿಭಾಗಕ್ಕೆ 1–ಡಿವೈಎಸ್‌ಪಿ, 1–ಪ್ರದಸ, 1–ಬೆರಳಚ್ಚುಗಾರರ, 2–ಸಿ.ಪಿ.ಸಿ., ಮತ್ತು 1–ಎ.ಪಿ.ಸಿ.(ಚಾ) ಹುದ್ದೆಗಳೊಂದಿಗೆ ಸೃಜಿಸಲು ತಗಲುವ ಆವರ್ತಕ ವೆಚ್ಚ ರೂ.19,05,300–00 ಮತ್ತು ಅನಾವರ್ತಕ ವೆಚ್ಚ ರೂ.10,73,000–00 ಒಟ್ಟು ರೂ.29,78,300–00 ಗಳಿಗೆ ಮಂಜೂರಾತಿ ಆದೇಶ ಹೊರಡಿಸುವಂತೆ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರವನ್ನು ಕೋರಿರುತ್ತಾರೆ.

ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕ ರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 42 ಪಿಓಪಿ 2014, ಬೆಂಗಳೂರು, ದಿನಾಂಕ: 24–06–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮಂಡ್ಯ ಜಿಲ್ಲೆ, ನಾಗಮಂಗಲದಲ್ಲಿ ಹೊಸದಾಗಿ ಪೊಲೀಸ್ ಉಪ–ವಿಭಾಗ ತೆರೆಯಲು ಸರ್ಕಾರದ ಮಂಜೂರಾತಿಯನ್ನು ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 78 ವೆಚ್ಚ–11:2014, ದಿನಾಂಕ:24–04–2014ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 89
**ಹೆಚ್.ಆರ್. ಪುಟ್ಟೇಗೌಡ**

S.C. 50
ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ. (ಪೊಲೀಸ್ ವೆಚ್ಚ)

## ಒಳಾಡಳಿತ ಸಚಿವಾಲಯ

**ವಿಷಯ:** ಗದಗ ಜಿಲ್ಲೆ, ನರಗುಂದದಲ್ಲಿ ಪೊಲೀಸ್ ಉಪ–ವಿಭಾಗ ತೆರೆಯುವ ಕುರಿತು

**ಓದಲಾಗಿದೆ:** ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ: ಆರ್‌ಎಲ್‌ಎನ್(4)24/2012–13, ದಿನಾಂಕ: 18–06–2014.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 18–06–2014 ರ ಪತ್ರದಲ್ಲಿ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಗದಗ ಜಿಲ್ಲೆಯಲ್ಲಿ ಪ್ರಸ್ತುತ ಒಂದೇ ಪೊಲೀಸ್ ಉಪ ವಿಭಾಗ ಕಾರ್ಯನಿರ್ವಹಿಸುತ್ತಿದ್ದು, ಹೆಚ್ಚುತ್ತಿರುವ ಜನಸಂಖ್ಯೆ, ಅಪರಾಧ ಪ್ರಕರಣಗಳು, ಕೋಮು ಗಲಭೆಗಳು, ರೈತರ ಪ್ರತಿಭಟನೆಗಳು ಮುಂತಾದವುಗಳನ್ನು ನಿರ್ವಹಿಸುವುದು ಕಷ್ಟಸಾಧ್ಯವಾಗಿರುವುದರಿಂದ, ಗದಗ ವಿಭಾಗವನ್ನು ವಿಭಜಿಸಿ ಹೊಸದಾಗಿ ನರಗುಂದ ಪೊಲೀಸ್ ಉಪ ವಿಭಾಗವನ್ನು ಕೆಳಕಂಡ ಸಿಬ್ಬಂದಿ ಬಲದೊಂದಿಗೆ ಸೃಜಿಸುವುದು ಅತ್ಯವಶ್ಯಕವಾಗಿರುತ್ತದೆ ಎಂದು ಪ್ರಸ್ತಾಪಿಸಿರುತ್ತಾರೆ.

| ಕ್ರ.ಸಂ. | ಹುದ್ದೆ | ಸಂಖ್ಯೆ |
|---|---|---|
| **1** | ಡಿವೈಎಸ್‌ಪಿ | 01 |
| **2** | ಪ್ರ.ದ.ಸ | 01 |
| **3** | ಟೈಪಿಸ್ಟ್ | 01 |
| **4** | ಸಿ.ಹೆಚ್.ಸಿ. | 01 |
| **5** | ಸಿ.ಪಿ.ಸಿ | 02 |
| **6** | ಎ.ಪಿ.ಸಿ. (ಚಾ) | 01 |
| | **ಒಟ್ಟು** | **07** |

ಮುಂದುವರೆದು, ರಾಷ್ಟ್ರೀಯ ಪೊಲೀಸ್ ಆಯೋಗವು 3 ಪೊಲೀಸ್ ಠಾಣೆಗಳಿಗೆ ಅಥವಾ 1200 ಐ.ಪಿ.ಸಿ. ಪ್ರಕರಣಗಳು ದಾಖಲಾದಲ್ಲಿ ಪ್ರತ್ಯೇಕ ಉಪವಿಭಾಗ ಸೃಜನೆಗೆ ಶಿಫಾರಸ್ಸು ಮಾಡಿರುವುದರಿಂದ, ಗದಗ ಉಪವಿಭಾಗವನ್ನು ವಿಭಜಿಸಿ ನರಗುಂದ ಉಪವಿಭಾಗವನ್ನು ರೂ.16,06,506–00 ಗಳ ಆವರ್ತಕ ವೆಚ್ಚ ಮತ್ತು ರೂ.8,88,000–00ಗಳ ಅನಾವರ್ತಕ ವೆಚ್ಚಗಳಲ್ಲಿ ಸೃಜಿಸಲು ಮಂಜೂರಾತಿ ನೀಡುವಂತೆ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರವನ್ನು ಕೋರಿರುತ್ತಾರೆ.

ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 179 ಪಿಓಪಿ 2014, ಬೆಂಗಳೂರು, ದಿನಾಂಕ: 09–09–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಗದಗ ಜಿಲ್ಲೆ, ನರಗುಂದದಲ್ಲಿ ಹೊಸದಾಗಿ ಪೊಲೀಸ್ ಉಪವಿಭಾಗವನ್ನು ತೆರೆಯಲು ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 438 ವೆಚ್ಚ–11:2014, ದಿನಾಂಕ:27–08–2014ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ಪುಟ್ಟೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ. (ಪೊಲೀಸ್ ವೆಚ್ಚ)

**P.R. 90**

**S.C. 50**

## ಕಾನೂನು ಸಚಿವಾಲಯ

**ವಿಷಯ:** ಕಿತ್ತೂರು ಕಂದಾಯ ತಾಲ್ಲೂಕು, ಬೆಳಗಾವಿ ಜಿಲ್ಲೆ ಇಲ್ಲಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಪತ್ರ ಸಂಖ್ಯೆ: ಲಾ 138 ಎಲ್‌ಸಿಎಲ್ 2013, ದಿನಾಂಕ: 27–08–2013.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾವಿ ಜಿಲ್ಲೆ ರವರ ಪತ್ರ ದಿನಾಂಕ: 19–08–2013.
3. ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಳಗಾವಿ ಜಿಲ್ಲೆರವರ ಪತ್ರ ದಿನಾಂಕ: 26–11–2014.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಸರ್ಕಾರವು ಕರ್ನಾಟಕ ಭೂ ಕಂದಾಯ ಅಧಿನಿಯಮ 1964 (ಕರ್ನಾಟಕ 1964ರ ಅಧಿನಿಯಮ 12) ಕಲಂ 4ರ ಉಪ ಕಲಂ (4) ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೊಸ ತಾಲ್ಲೂಕು ಕಿತ್ತೂರನ್ನು ರಚಿಸಿದ್ದು, ಸದರಿ ತಾಲ್ಲೂಕಿಗೆ ನೋಟರಿ ಹುದ್ದೆ ತುಂಬುವಂತೆ ಸಾರ್ವಜನಿಕರಿಂದ ಮನವಿಗಳು ಸರ್ಕಾರದಲ್ಲಿ ಸ್ವೀಕೃತವಾಗಿದ್ದು, ಅದರಂತೆ ಮೇಲೆ ಓದಲಾದ (1)ರ ದಿನಾಂಕ: 27–08–2013 ರ ಪತ್ರದಲ್ಲಿ ಬೆಳಗಾವಿ ಜಿಲ್ಲೆಯ ಕಿತ್ತೂರು ಕಂದಾಯ ತಾಲ್ಲೂಕಿಗೆ ನೋಟರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬೆಳಗಾವಿ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು ಬೆಳಗಾವಿ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾವಿ ಜಿಲ್ಲೆ ಇವರು ಮೇಲೆ ಓದಲಾದ (2) ರ ದಿನಾಂಕ: 19–08–2013 ಪತ್ರದೊಂದಿಗೆ ಕಿತ್ತೂರ ನ್ಯಾಯವಾದಿಗಳ ಸಂಘ ಇವರಿಂದ ಸ್ವೀಕೃತವಾದ ವರದಿಯನ್ನು ಲಗತ್ತಿಸಿ ಕಳುಹಿಸಿದ್ದು, ಸದರಿ ವರದಿಯಲ್ಲಿ, ಕಿತ್ತೂರು ತಾಲ್ಲೂಕು 18 ಗ್ರಾಮಪಂಚಾಯಿತಿಗಳನ್ನು ಮತ್ತು 44 ಗ್ರಾಮಗಳನ್ನು ಹೊಂದಿದ್ದು, ಸರ್ಕಾರಿ ಹಾಗೂ ಖಾಸಗಿ ಶಾಲಾ ಕಾಲೇಜುಗಳು ಸಹ ಕಾರ್ಯನಿರ್ವಹಿಸುತ್ತಿರುವುದರಿಂದ, ಕಿತ್ತೂರು ಕಂದಾಯ ತಾಲ್ಲೂಕಿಗೆ ಒಂದು ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆಯಿದೆ ಎಂದು ವಿನಂತಿಸಿರುತ್ತಾರೆ.

ಅದರಂತೆ, ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ಮೇಲೆ ಓದಲಾದ (3)ರ ಪತ್ರದಲ್ಲಿ ಕಿತ್ತೂರಿನಲ್ಲಿ ಇಲ್ಲಿಯವರೆಗೆ ರಾಜ್ಯ ಸರ್ಕಾರದಿಂದಾಗಲಿ, ಕೇಂದ್ರ ಸರ್ಕಾರದಿಂದಾಗಲಿ ಯಾವುದೇ ನೋಟರಿಗಳು ನೇಮಕಗೊಂಡಿರುವುದಿಲ್ಲವಾದ್ದರಿಂದ, ಒಂದು ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆಯಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಲಾ 138 ಎಲ್‌ಸಿಎಲ್ 2013, ಬೆಂಗಳೂರು, ದಿನಾಂಕ: 09ನೇ ಜನವರಿ, 2015**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಬೆಳಗಾಂ ಜಿಲ್ಲೆಯ ಕಿತ್ತೂರು ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಯಿದಾ ಬಾನು,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ. (ಆಡಳಿತ–2)

**P.R. 91**

**S.C. 25**

## ಆರ್ಥಿಕ ಸಚಿವಾಲಯ

**ವಿಷಯ:** ಹಾಸನ ಜಿಲ್ಲೆಯ ಶ್ರವಣಬೆಳಗೊಳದಲ್ಲಿ ನಡೆಯಲಿರುವ ಅಖಿಲ ಭಾರತ 81ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಹಾಸನ ಜಿಲ್ಲೆಯ ರಾಜ್ಯ ಸರ್ಕಾರಿ ನೌಕರರ ಒಂದು ದಿನದ ವೇತನವನ್ನು ವಂತಿಗೆಯಾಗಿ ಕಟಾವು ಮಾಡುವ ಬಗ್ಗೆ.

**ಓದಲಾಗಿದೆ:** 1. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರ ಪತ್ರ ಸಂಖ್ಯೆ: 4080/2013–14, ದಿನಾಂಕ: 23–12–2014.

2. ಹಾಸನ ಜಿಲ್ಲೆಯ ಜಿಲ್ಲಾಧಿಕಾರಿಯವರ ಪತ್ರ ಸಂಖ್ಯೆ: ಮುನಿಸಿ(3)/ಸಿ.ಆರ್./142/2014–15 ದಿನಾಂಕ: 04–01–2015.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರ ದಿನಾಂಕ: 23–12–2014ರ ಮನವಿ ಪತ್ರದಲ್ಲಿ ಹಾಸನ ಜಿಲ್ಲೆಯ ಶ್ರವಣಬೆಳಗೊಳದಲ್ಲಿ 2015ನೇ ಫೆಬ್ರವರಿ ಮಾಹೆಯ 1, 2 ಹಾಗೂ 3 ರಂದು "ಅಖಿಲ ಭಾರತ 81ನೇ ಕನ್ನಡ ಸಾಹಿತ್ಯ ಸಮ್ಮೇಳನ" ವನ್ನು ನಡೆಸಲಾಗುತ್ತಿರುವುದರಿಂದ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಹಾಸನ ಜಿಲ್ಲಾ ಶಾಖೆಯ ಕಾರ್ಯಕಾರಿ ಸಮಿತಿಯ ಸಾಹಿತ್ಯ ಸಮ್ಮೇಳನಕ್ಕೆ ಜಿಲ್ಲೆಯ ಸರ್ಕಾರಿ ನೌಕರರ ಒಂದು ದಿನದ ವೇತನವನ್ನು ವಂತಿಗೆ ರೂಪದಲ್ಲಿ ನೀಡಲು ನಿರ್ಣಯ ಕೈಗೊಂಡು ಒಟ್ಟಾರೆ ಸಂಗ್ರಹವಾಗುವ ಬಾಬ್ತಿನಲ್ಲಿ ಶೇ.50 ರಷ್ಟನ್ನು "ಅಖಿಲ ಭಾರತ 81ನೇ ಕನ್ನಡ ಸಾಹಿತ್ಯ ಸಮ್ಮೇಳನ" ಕ್ಕೆ ಬಳಸಿಕೊಳ್ಳಲು ಅಖಿಲ ಭಾರತ 81ನೇ ಕನ್ನಡ ಸಾಹಿತ್ಯ ಸಮ್ಮೇಳನದ ಲೆಕ್ಕ ಶೀರ್ಷಿಕೆಗೆ ಹಾಗೂ ಇನ್ನುಳಿದ ಶೇ.50 ರಷ್ಟು ಹಣವನ್ನು ಹಾಸನ ಜಿಲ್ಲಾ ಶಾಖೆ ರಾಜ್ಯ ಸರ್ಕಾರಿ ನೌಕರರ ಸಮುದಾಯ ಭವನ ನಿರ್ಮಾಣಕ್ಕೆ ಬಳಸಲು ಜಿಲ್ಲಾ ಶಾಖಾ ಸಂಘದ ಖಾತೆಗೆ ಜಮಾಗೊಳಿಸುವಂತೆ ಆದೇಶ ಹೊರಡಿಸಲು ಸರ್ಕಾರವನ್ನು ಕೋರಿರುತ್ತಾರೆ. ಅವರ ಕೋರಿಕೆಯನ್ನು ಪರಿಶೀಲಿಸಿದ ಸರ್ಕಾರವು, ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 28 ಎಸ್‌ಆರ್‌ಪಿ 2014, ಬೆಂಗಳೂರು, ದಿನಾಂಕ: 16ನೇ ಜನವರಿ, 2015**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭಗಳ ಹಿನ್ನೆಲೆಯಲ್ಲಿ, 2015ರ ಫೆಬ್ರವರಿ ಮಾಹೆಯ ದಿನಾಂಕ 1, 2 ಹಾಗೂ 3 ರಂದು ಹಾಸನ ಜಿಲ್ಲೆಯ ಶ್ರವಣಬೆಳಗೊಳದಲ್ಲಿ ನಡೆಯಲಿರುವ "81ನೇ ಕನ್ನಡ ಸಾಹಿತ್ಯ ಸಮ್ಮೇಳನ" ಕ್ಕೆ ಹಾಸನ ಜಿಲ್ಲಾ ಸರ್ಕಾರಿ ನೌಕರರ ಜನವರಿ 2015ರ ತಿಂಗಳ ವೇತನದಲ್ಲಿ ಒಂದು ದಿನದ ವೇತನವನ್ನು ವಂತಿಗೆ ರೂಪದಲ್ಲಿ ಕಟಾಯಿಸಿ ಅದರಿಂದ ಸಂಗ್ರಹವಾದ ಒಟ್ಟು ಮೊತ್ತದ ಶೇ. 50 ರಷ್ಟನ್ನು ಅಖಿಲ ಭಾರತ 81ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಬಳಸಿಕೊಳ್ಳಲು ಸರ್ಕಾರವು ಈ ಮೂಲಕ ಮಂಜೂರಾತಿ ನೀಡಿದೆ. ಹೀಗೆ ಕಟಾಯಿಸಲಾಗುವ ಒಟ್ಟು ಮೊತ್ತವನ್ನು ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ ಇವರಿಗೆ ಚೆಕ್ಕಿನ ಮೂಲಕ ಖಜಾನೆ ಅಧಿಕಾರಿಗಳು ಸಂದಾಯ ಮಾಡುವ ವಿಧಿ ವಿಧಾನಗಳು ಈ ಕೆಳಗಿನಂತೆ ಇವೆ:–

ಅ) ನೌಕರರ ಒಂದು ದಿನದ ವೇತನ ವಂತಿಗೆಯನ್ನು ಜನವರಿ 2015ರ ತಿಂಗಳ ವೇತನದ ಬಿಲ್ಲಿನಲ್ಲಿ ಕಟಾವುಗೊಳಿಸುವ ಮೂಲಕ ವಸೂಲು ಮಾಡಲು ಆಯಾ ಕಛೇರಿ ಮುಖ್ಯಾಧಿಕಾರಿಗಳು ಮತ್ತು ಖಜಾನಾಧಿಕಾರಿಗಳು ಅಧಿಕಾರ ಪಡೆದಿರುತ್ತಾರೆ.

ಆ) ಒಂದು ದಿನದ ವೇತನವನ್ನು ವಂತಿಗೆಯಾಗಿ ಕೊಡಲಿಚ್ಛಿಸದ ನೌಕರರು ತಮ್ಮ ಅಸಮ್ಮತಿಯನ್ನು ಸಂಬಂಧಪಟ್ಟ ಬಟವಾಡೆ ಅಧಿಕಾರಿಗಳಿಗೆ ಲಿಖಿತ ಮೂಲಕ ಸಲ್ಲಿಸತಕ್ಕದ್ದು ಮತ್ತು ಅಂತಹ ನೌಕರರು ಲಿಖಿತ ಪತ್ರವನ್ನು 2015ರ ಜನವರಿ ತಿಂಗಳಿನ ಸಂಬಳದ ಬಿಲ್ಲನ್ನು ಖಜಾನೆಗೆ ಸಲ್ಲಿಸುವ ದಿನಾಂಕದ ಒಳಗಾಗಿ ಸಲ್ಲಿಸಿದ್ದಲ್ಲಿ ಮಾತ್ರ ಅಂತಹ ನೌಕರನ/ಳ ಒಂದು ದಿನದ ವೇತನವನ್ನು 2015ರ ಜನವರಿ ತಿಂಗಳಿನ ವೇತನ ಬಿಲ್ಲಿನಲ್ಲಿ ಕಟಾವು ಮಾಡತಕ್ಕದ್ದಲ್ಲ.

ಇ) ಪ್ರತಿಯೊಬ್ಬ ನೌಕರನ/ಳ ವೇತನದಲ್ಲಿ ಈ ಕುರಿತು ಕಟಾಯಿಸಿದ ವೇತನದ ಬಿಲ್ಲಿನಲ್ಲಿ ಅವರ ಹೆಸರಿನ ಎದುರಿನಲ್ಲಿ "81ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕಾಗಿ ವಂತಿಗೆ" ಎಂದು ಪ್ರತ್ಯೇಕ ಅಂಕಣದಲ್ಲಿ ಕಾಣಿಸಬೇಕು ಮತ್ತು ಸಮಗ್ರ ವೇತನ ಬಿಲ್ಲಿನಲ್ಲಿ ಕಡಿತಗೊಳಿಸಿದ ಒಟ್ಟು ಮೊತ್ತವನ್ನು ವೇತನ ಬಿಲ್ಲಿನ ಮುಖ ಪುಟದಲ್ಲಿ "81ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕಾಗಿ ವಂತಿಗೆ" ಎಂಬುದಾಗಿ ಸ್ಪಷ್ಟವಾಗಿ ನಮೂದಿಸಬೇಕು. ಜಿಲ್ಲಾ ಖಜಾನೆ ಅಧಿಕಾರಿಗಳು ಒಟ್ಟು ಮೊತ್ತವನ್ನು ಈ ಕೆಳಗೆ ನಮೂದಿಸಿರುವ ಲೆಕ್ಕ ಶೀರ್ಷಿಕೆಗೆ ವರ್ಗಾವಣೆ ಜಮಾ ಮಾಡುವ ಮೂಲಕ ಬಿಲ್ಲನ್ನು ಪಾವತಿ ಮಾಡಬೇಕು. ವೇತನ ಬಟವಾಡೆ ಮಾಡಲು ನಿವ್ವಳ ಮೊತ್ತಕ್ಕೆ ಚೆಕ್ಕನ್ನು ಬಟವಾಡೆ ಅಧಿಕಾರಿಗೆ ಅವರು ನೀಡಬೇಕು.

ಈ) 81ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕಾಗಿ ಹಾಸನ ಜಿಲ್ಲೆಯ ರಾಜ್ಯ ಸರ್ಕಾರಿ ಅಧಿಕಾರಿ/ನೌಕರರ ಒಂದು ದಿನದ ವೇತನವನ್ನು ಕಟಾಯಿಸಿ ಲೆಕ್ಕ ಶೀರ್ಷಿಕೆ "8658–00–102–4–29" ಹಾಸನ ಜಿಲ್ಲೆಯ ಶ್ರವಣಬೆಳಗೊಳದಲ್ಲಿ ನಡೆಯಲಿರುವ 81ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ವಂತಿಗೆ" ಯಡಿ ಜಮಾ ಮಾಡತಕ್ಕದ್ದು. ಹೀಗೆ ಜಮೆಯಾಗುವ ಒಟ್ಟು ಮೊತ್ತದಲ್ಲಿ ಶೇ.50ರಷ್ಟು ಮೊತ್ತಕ್ಕೆ ಜಿಲ್ಲಾ ಖಜಾನೆ ಅಧಿಕಾರಿಯು ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ ಇವರಿಗೆ ಚೆಕ್ಕನ್ನು ನೀಡುವುದು.

ಉ) 2015ರ ಜನವರಿ ತಿಂಗಳಿನಲ್ಲಿ ಸ್ವೀಕರಿಸಲಾದ ವೇತನ ಬಿಲ್ಲುಗಳ ನಿರ್ವಹಣೆಯನ್ನು 2015ರ ಫೆಬ್ರವರಿ 10ನೇ ದಿನಾಂಕದೊಳಗೆ ಪೂರೈಸಬೇಕು. ಫೆಬ್ರವರಿ ತಿಂಗಳು ಅಂತ್ಯಗೊಂಡ ನಂತರ ಪಾವತಿ ಮಾಡಿದ ಬಿಲ್ಲುಗಳ ಪ್ರಕರಣಗಳಲ್ಲಿ ಅವುಗಳನ್ನು ಪಾವತಿ ಮಾಡಿದ ಒಂದು ವಾರದೊಳಗೆ ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ ಇವರಿಗೆ ಚೆಕ್ಕನ್ನು ಕಳುಹಿಸಬೇಕು ಹಾಗೂ ಹೀಗೆ ಕೈಗೊಂಡ ಕ್ರಮದ ಬಗ್ಗೆ ಒಂದು ಪ್ರತಿಯನ್ನು ಆರ್ಥಿಕ ಇಲಾಖೆಗೆ ಕಳುಹಿಸತಕ್ಕದ್ದು.

ಊ) ಮಹಾಲೇಖಪಾಲರು ನೀಡಿದ ಅಧಿಕಾರ ಪತ್ರದ ಮೇಲೆ ತಮ್ಮ ವೇತನವನ್ನು ಖಜಾನೆಯಿಂದ ಪಡೆಯುವ ಅಧಿಕಾರಿಗಳೂ ಸಹ ಮೇಲೆ ಕಾಣಿಸಿದ ಕ್ರಮವನ್ನು ಪಾಲಿಸುವುದು.

ಋ) ಜಿಲ್ಲಾಧಿಕಾರಿ, ಹಾಸನ ಜಿಲ್ಲೆ ಅವರು ಈ ವಂತಿಗೆಯ ಶೇ.50ರಷ್ಟು ಹಣವನ್ನು ಸಮ್ಮೇಳನದ ಉದ್ದೇಶಿತ ಕಾರ್ಯಕ್ಕೆ ಬಳಸಿಕೊಳ್ಳುವ ಅಧಿಕಾರ ಹೊಂದಿರುತ್ತಾರೆ.

ಎ) ಉಳಿದ ಶೇ.50 ರಷ್ಟು ಮೊತ್ತವನ್ನು ಯಾವ ಉದ್ದೇಶಕ್ಕೆ ಬಳಸಿಕೊಳ್ಳಬೇಕು ಎಂಬ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**
ಸರ್ಕಾರದ ಜಂಟಿ ಕಾರ್ಯದರ್ಶಿ,
ಆರ್ಥಿಕ ಇಲಾಖೆ. (ಸೇವೆಗಳು–2)

**P.R. 92**
**S.C. 50**

## ಸಿಬ್ಬಂದಿ ಮತ್ತು ಆಡಳಿತಾ ಸುಧಾರಣಾ ಸಚಿವಾಲಯ

**ವಿಷಯ:** ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ(ಇ–ಆಡಳಿತ)ದಲ್ಲಿ ತಾಂತ್ರಿಕ ಕೋಶವನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ಸಿಆಸುಇ (ಇ–ಆಡಳಿತ)ದ ಕಡತ ಸಂಖ್ಯೆ: ಸಿಆಸುಇ 70 ಇಆಇ 2011.

**ಪ್ರಸ್ತಾವನೆ:**

ಮೇಲೆ ಓದಲಾದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ(ಇ–ಆಡಳಿತ)ದಲ್ಲಿ ಕಡತದಲ್ಲಿ ಪ್ರಸ್ತುತ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಹಾಗೂ ಇ.ಡಿ.ಸಿ.ಎಸ್. ನಿರ್ದೇಶನಾಲಯಕ್ಕೆ ಸೇರಿದ ಕೆಲವು ಅಧಿಕಾರಿಗಳ ಸೇವೆಯನ್ನು ತಾತ್ಕಾಲಿಕವಾಗಿ ಪಡೆದು ವಿವಿಧ ತಾಂತ್ರಿಕ ಕಾರ್ಯಗಳನ್ನು ನಿರ್ವಹಿಸಲಾಗುತ್ತಿದ್ದು, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ(ಇ–ಆಡಳಿತ)ದಲ್ಲಿ ತಾಂತ್ರಿಕ ಹುದ್ದೆಗಳು ಮಂಜೂರು ಆಗದೆ ಇರುವುದರಿಂದ, ನಿಯೋಜನೆ / ಅನ್ಯ ಸೇವೆಯ ಆಧಾರದ ಮೇಲೆ ಸೇವೆಯನ್ನು ಪಡೆಯಲಾಗುತ್ತಿದ್ದು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ನಿರ್ದೇಶನಾಲಯದ ಈ ಕೆಳಕಂಡ 16 ಹುದ್ದೆಗಳನ್ನು ಮತ್ತು ವಿದ್ಯುನ್ಮಾನ ನಾಗರಿಕ ಸೇವಾ ವಿತರಣಾ (ಇ.ಡಿ.ಸಿ.ಎಸ್.) ನಿರ್ದೇಶನಾಲಯದ ಒಂದು ಹುದ್ದೆ ಒಟ್ಟು 17 ಹುದ್ದೆಗಳನ್ನು ಸದರಿ ನಿರ್ದೇಶನಾಲಯಗಳಲ್ಲಿ ರದ್ದುಗೊಳಿಸಿ, ಅಷ್ಟೇ ಸಂಖ್ಯೆಯ, ಅದೇ ವೇತನ ಶ್ರೇಣಿಯ ಒಟ್ಟು 17 ಹುದ್ದೆಗಳನ್ನು ಒಳಗೊಂಡ ತಾಂತ್ರಿಕ ಕೋಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ(ಇ–ಆಡಳಿತ)ದಲ್ಲಿ ಸೃಜಿಸಲು ಕೋರಿರುತ್ತಾರೆ.

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1 | 2 | 3 | 4 |
| 1 | ಸಿಸ್ಟಂ ಅನಲಿಸ್ಟ್ | 1 | 36300–53850 |
| 2 | ಸೀನಿಯರ್ ಪ್ರೋಗ್ರಾಮರ್ | 4 | 28100–50100 |
| 3 | ಸಹಾಯಕ ನಿರ್ದೇಶಕರು | 1 | 24000–45300 |
| 4 | ಜೂನಿಯರ್ ಪ್ರೋಗ್ರಾಮರ್ | 2 | 22800–43200 |
| 5 | ಪ್ರೋಗ್ರಾಮಿಂಗ್ ಅಸಿಸ್ಟೆಂಟ್ | 2 | 21600–40050 |
| 6 | ಜೂನಿಯರ್ ಕನ್ಸೋಲ್ ಆಪರೇಟರ್ | 3 | 21600–40050 |

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1 | 2 | 3 | 4 |
| 7 | ಪ್ರಥಮ ದರ್ಜೆ ಸಹಾಯಕ | 1 | 14550–27600 |
| 8 | ಡಾಟಾ ಎಂಟ್ರಿ ಆಪರೇಟರ್ (ಗ್ರೇಟ್–1) | 2 | 14550–26700 |
| 9 | ಎರಡನೇ ದರ್ಜೆ ಸಹಾಯಕ | 1 | 11600–21000 |
| ಒಟ್ಟು | | 17 | |

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 275 ಸಅಸೇ 2011, ಬೆಂಗಳೂರು, ದಿನಾಂಕ: 19ನೇ ಮಾರ್ಚ್, 2015**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ 16 ಹುದ್ದೆಗಳನ್ನು ಮತ್ತು ವಿದ್ಯುನ್ಮಾನ ನಾಗರಿಕ ಸೇವಾ ವಿತರಣಾ (ಇ.ಡಿ.ಸಿ.ಎಸ್.) ನಿರ್ದೇಶನಾಲಯದ ಒಂದು ಹುದ್ದೆ ಒಟ್ಟು 17 ಹುದ್ದೆಗಳನ್ನು ಸದರಿ ನಿರ್ದೇಶನಾಲಯಗಳಲ್ಲಿ ರದ್ದುಗೊಳಿಸಿ, ಅಷ್ಟೇ ಸಂಖ್ಯೆಯ ಸದರಿ ಶ್ರೇಣಿಯ ಹುದ್ದೆಗಳನ್ನು ಒಳಗೊಂಡ ತಾಂತ್ರಿಕ ಕೋಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ(ಇ–ಆಡಳಿತ)ದಲ್ಲಿ ಸೃಜಿಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ (ರೂ.ಗಳಲ್ಲಿ) |
|---|---|---|---|
| 1 | 2 | 3 | 4 |
| 1 | ಸಿಸ್ಟಂ ಅನಲಿಸ್ಟ್ | 1 | 36300–53850 |
| 2 | ಸೀನಿಯರ್ ಪ್ರೋಗ್ರಾಮರ್ | 4 | 28100–50100 |
| 3 | ಸಹಾಯಕ ನಿರ್ದೇಶಕರು | 1 | 24000–45300 |
| 4 | ಜೂನಿಯರ್ ಪ್ರೋಗ್ರಾಮರ್ | 2 | 22800–43200 |
| 5 | ಪ್ರೋಗ್ರಾಮಿಂಗ್ ಅಸಿಸ್ಟೆಂಟ್ | 2 | 21600–40050 |
| 6 | ಜೂನಿಯರ್ ಕನ್ಸೋಲ್ ಆಪರೇಟರ್ | 3 | 21600–40050 |
| 7 | ಪ್ರಥಮ ದರ್ಜೆ ಸಹಾಯಕ | 1 | 14550–26700 |
| 8 | ಡಾಟಾ ಎಂಟ್ರಿ ಆಪರೇಟರ್ (ಗ್ರೇಟ್–1) | 2 | 14550–26700 |
| 9 | ಎರಡನೇ ದರ್ಜೆ ಸಹಾಯಕ | 1 | 11600–21000 |
| ಒಟ್ಟು | | 17 | |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: 615 ವೆಚ್ಚ–12/2011 ದಿನಾಂಕ:28–09–2011ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು–6)

P.R. 264

## ಸಿಬ್ಬಂದಿ ಮತ್ತು ಆಡಳಿತಾ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿಯೊಂದಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 205 ಸಅಸೇ 2009, ದಿನಾಂಕ: 20–04–2009.
2. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 162 ಸಉಸೇ 2014, ದಿನಾಂಕ: 11–06–2014.
3. ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ವಇ 22 ಸ್ವೀಮರ 2008, ದಿನಾಂಕ: 03–03–2015.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯಲ್ಲಿ ಸೃಜಿಸಲಾಗಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿಯೊಂದಿಗೆ ತಾತ್ಕಾಲಿಕವಾಗಿ ದಿನಾಂಕ: 01–04–2014 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿತ್ತು. ಮೇಲೆ ಓದಲಾದ ಕ್ರಮಸಂಖ್ಯೆ (3)ರ ಅನಧಿಕೃತ ಟಿಪ್ಪಣಿಯಲ್ಲಿ ಸಚಿವಾಲಯದ ವಸತಿ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿಯೊಂದಿಗೆ ಮುಂದುವರಿಸುವಂತೆ ಕೋರಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| **1** | **2** | **3** |
| **1** | ಆಪ್ತ ಕಾರ್ಯದರ್ಶಿ | 01 |
| **2** | ಶ್ರೀಘಲಿಪಿಗಾರರು/ ಹಿರಿಯ ಶ್ರೀಘಲಿಪಿಗಾರರು / ಪತ್ರಾಂಕಿತ ಆಪ್ತ ಸಹಾಯಕರು | 02 |
| **3** | ಕಿರಿಯ ಸಹಾಯಕ/ಸಹಾಯಕ | 01 |
| **4** | ವಾಹನ ಚಾಲಕರು | 01 |
| **5** | ದಲಾಯತ್ | 02 |
| ಒಟ್ಟು | | 07 ಹುದ್ದೆಗಳು |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 129 ಸಲುಸೇ 2015, ಬೆಂಗಳೂರು, ದಿನಾಂಕ: 26ನೇ ಮಾರ್ಚ್, 2015**

ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕಸಿಬ್ಬಂದಿಯ ಹುದ್ದೆಗಳೊಂದಿಗೆ ದಿನಾಂಕ: 01–04–2015 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| **1** | **2** | **3** |
| **1** | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್–2) | **01** |
| **2** | ಶ್ರೀಘಲಿಪಿಗಾರರು/ ಹಿರಿಯ ಶ್ರೀಘಲಿಪಿಗಾರರು / ಪತ್ರಾಂಕಿತ ಆಪ್ತ ಸಹಾಯಕರು | 02 |
| **3** | ಕಿರಿಯ ಸಹಾಯಕ/ಸಹಾಯಕ | 01 |
| **4** | ವಾಹನ ಚಾಲಕರು | 01 |
| **5** | ದಲಾಯತ್ | 02 |
| **ಒಟ್ಟು** | | 07 ಹುದ್ದೆಗಳು |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10–07–1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ**

**P.R. 265**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು–6)

## ಸಿಬ್ಬಂದಿ ಮತ್ತು ಆಡಳಿತಾ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ)ಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 177 ಸಲುಸೇ 2014, ದಿನಾಂಕ: 28–06–2014.

2. ಸರ್ಕಾರದ ಪ್ರಧಾನ ಕಾರ್ಯದರ್ಶಿ, (ಆಡಳಿತ ಸುಧಾರಣೆ) ಸಿಆಸುಇಲಾಖೆ, ರವರ ಅ.ಟಿ. ಸಂಖ್ಯೆ: ಸಿಆಸುಇ/25/ಪ್ರಕಾ(ಆಸು) 2015, ದಿನಾಂಕ: 02–03–2015.

**ಪ್ರಸ್ತಾವನೆ:**

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ)ಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿಗಳೊಂದಿಗೆ ತಾತ್ಕಾಲಿಕವಾಗಿ ವರ್ಷದಿಂದ ವರ್ಷಕ್ಕೆ ಮುಂದುವರೆಸಿಕೊಂಡು ಬಂದಿದ್ದು, ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ: 01–04–2014 ರಿಂದ ದಿನಾಂಕ: 31–03–2015ರ ವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಸು)ಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 01–04–2015 ರಿಂದ ಮುಂದುವರಿಸಲು ಕೋರಿರುತ್ತಾರೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | 2 | 3 |
| 1 | ಆಪ್ತ ಕಾರ್ಯದರ್ಶಿ(ಆಪ್ತ ಕಾರ್ಯದರ್ಶಿ ಗ್ರೇಡ್–1 / ಆಪ್ತ ಕಾರ್ಯದರ್ಶಿ ಗ್ರೇಡ್–2/ ಪತ್ರಾಂಕಿತ ಆಪ್ತ ಸಹಾಯಕ) ಹಿರಿಯ ಶ್ರೀಘಲಿಪಿಗಾರರು/ ಶ್ರೀಘಲಿಪಿಗಾರರು | 3 |
| 2 | ಭಾಷಾಂತರಕಾರರು (ಶಾಖಾಧಿಕಾರಿ/ ಹಿರಿಯ ಸಹಾಯಕರು) | 1 |
| 3 | ಸಹಾಯಕರು / ಕಿರಿಯ ಸಹಾಯಕರು | 1 |
| 4 | ವಾಹನ ಚಾಲಕರು | 1 |
| 5 | ಗ್ರೂಪ್–ಡಿ ಹುದ್ದೆ (ಜಮೇದಾರ/ ದಲಾಯತ) | 2 |

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 127 ಸಲುಸೇ 2015, ಬೆಂಗಳೂರು, ದಿನಾಂಕ: 20ನೇ ಮಾರ್ಚ್, 2015**

ಕರ್ನಾಟಕ ಸರ್ಕಾರ ಸಚಿವಾಲಯದ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿಗಳೊಂದಿಗೆ ದಿನಾಂಕ: 01–04–2015 ರಿಂದ ಒಂದು ವರ್ಷದ ವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | 2 | 3 |
| 1 | ಆಪ್ತ ಕಾರ್ಯದರ್ಶಿ(ಆಪ್ತ ಕಾರ್ಯದರ್ಶಿ ಗ್ರೇಡ್–1 / ಆಪ್ತ ಕಾರ್ಯದರ್ಶಿ ಗ್ರೇಡ್–2/ ಪತ್ರಾಂಕಿತ ಆಪ್ತ ಸಹಾಯಕ) | 1 |
| 2 | ಹಿರಿಯ ಶ್ರೀಘಲಿಪಿಗಾರರು/ ಶ್ರೀಘಲಿಪಿಗಾರರು/ ಪತ್ರಾಂಕಿತ ಆಪ್ತ ಸಹಾಯಕರು) | 2 |
| 3 | ಭಾಷಾಂತರಕಾರರು (ಶಾಖಾಧಿಕಾರಿ/ ಹಿರಿಯ ಸಹಾಯಕರು) | 1 |
| 4 | ಸಹಾಯಕರು / ಕಿರಿಯ ಸಹಾಯಕರು | 1 |
| 5 | ವಾಹನ ಚಾಲಕರು | 1 |
| 6 | ಗ್ರೂಪ್–ಡಿ ಹುದ್ದೆ (ಜಮೇದಾರ/ ದಲಾಯತ) | 2 |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10–07–1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು–6)

P.R. 266

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## COMMERCE AND INDUSTRIES SECRETARIAT

**Sub:** Transfer of Shares of Vijayanagar Steel Ltd., held by Officers of Government of Karnataka - reg.

**Read:** Letter of Managing Director, Vijayanagar Steel Ltd., No. VSL/MD/CI:ToS/2014-15, Dated: 11.02.2015.

**PREAMBLE:**

The Managing Director, Vijayanagar Steel Ltd., vide his letter read above has stated that the following officers of Government of Karnataka are holding one share each with a face value Rs. 1000/- of Vijayanagar Steel Ltd.

| Sl.No | No. of Shares | Share Amount Rs. | Share Holder |
|---|---|---|---|
| **01** | 01 | 1000/- | Sri Maheshwara Rao, IAS, Commissioner for ID & Director Industries & Commerce |
| **02** | 01 | 1000/ | Sri P B Ramamurthy, IAS, MD, KSIIDC & Chairman, VNSL |
| **03** | 01 | 1000/ | Sri Anil A Uppin, MD, VNVL & MD, MEI Ltd. |
| **04** | 01 | 1000/ | Sri ·G.S. Kulkarni, Director (Technical Cell), C&I Department |
| **05** | 01 | 1000/ | Sri Shivashankar Naik .L, Desk Officer (Technical Cell), C&I Department. |
| **06** | 01 | 1000/ | Sri M. Shivalingaswamy, Deputy Secretary, C&I Department. |
| **Total** | **06** | **6000/** | |

Has further stated that the above officers are transferred / retired and it is necessary to have the shares transferred to the officers, presently holding positions in Commerce and Industries Department.

Hence the following Order.

**GOVERNMENT ORDER NO: CI 154 SPI 2013, BANGALORE, DATED: 04.04.2015**

The Government is pleased to accord approval to the transfer of the shares of Vijayanagar Steel Ltd., in favour of the following officers of the Commerce and Industries Department.

| Sl.No | Share Holder | Official presently holding the post |
|---|---|---|
| 01 | Sri Maheshwara Rao, IAS, Commissioner for ID and Director Industries & Commerce | Sri Gaurav Gupta, IAS, Commissioner for ID and Director Industries & Commerce |
| 02 | Sri P B Ramamurthy, IAS, MD, KSIIDC & Chairman, VNSL | Sri Naveen Raj Singh, IAS, MD, KSIIDC & Chairman, VNSL |
| 03 | Sri M Shivalingaswamy, Deputy Secretary, C&I Department. | Sri M.D. Ravindranath. Additional Secretary. C&I Department. |
| 04 | Sri Shivashankar Naik L, Desk Officer (Technical Cell), C&I Department. | Smt S. Umadevi, Desk Officer (Technical Cell), C&I Department |

By Order and in the name of the Governor of Karnataka

**S. UMADEVI**
Desk Officer (Technical Cell),
Commerce & Industries Department.

**P.R. 267**
**S.C. 10**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59